# ಕಸ್ತೂರಿ

ಕನ್ನಡ ಡೈಜೆಸ್ಟ್



ಸಂಪಾದಕ :

ಬಿ. ವಿ. ಜಿಗಜಿನ್ನಿ

ಕಲೆ :

ಕೆ. ಬಿ. ಕುಲಕರ್ಣಿ

ಮುಖಪುಟ :

ಕಾದಿರುವಳು ನೀರೆ...

ಚಿತ್ರ :

ಸೂರ್ಯಕಾಂತ ದುಧೇದಿಯಾ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೦೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೩-೦೦ |
| ೨ ವರ್ಷಕ್ಕೆ | ,, | ೪೫-೦೦ |
| ೩ ವರ್ಷಕ್ಕೆ | ,, | ೬೬-೦೦ |

KASTURI October 1981

## ಬೆಳಕಿಂಡಿ

ದೃಷ್ಟಿಯು ವಿಸ್ತಾರವೆಲ್ಲಿಯವರೆಗೋ ಅಲ್ಲಿಯವರೆಗೂ ನಿಬಿಡ ಕತ್ತಲೆ.

*

ಆ ನಿಬಿಡ ಕತ್ತಲೆಯು ಸೀಳಿ ಬರಲು ಮಿಣುಕು ಹುಳಕ್ಕೆಂತು ಸಾಧ್ಯ?

*

ನಾವೆಲ್ಲ ಅಂಧಃಕಾರವನ್ನಡಗಿಸುವೆ-ವೆಂಬ ಅಹಂಕಾರದ ಮಿಣುಕು ಹುಳು-ಗಳು.

*

ಈ ಅಂಧಃಕಾರ ನಿರ್ನಾಮವಾಗ-ಬೇಕಾದರೆ ಕೋಟಿ ಸೂರ್ಯಸಮಪ್ರಭೆ ಬೇಕು. ಅವೆರಡಕ್ಕೂ ಕಾದಾಟವಾಗ-ಬೇಕು-ಕತ್ತಲೆ ಸಾಯಬೇಕು.

*

ಆದರೆ ಬೆಳಕಿನ ಸೀಮೆ ವಿಸ್ತರಿಸಿ-ದಂತೆಲ್ಲ ಕತ್ತಲೆಯು ಸೀಮೆಯೂ ವಿಸ್ತರಿಸುತ್ತದೆ.

—ರಾಜೇಂದ್ರ ಅನಸ್ಥಿ

*

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕ-ದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ನೋಡಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈಗ!

# ನಿಮ್ಮ ಉಳಿತಾಯವನ್ನು 6 ವರ್ಷಗಳಲ್ಲಿ ಇಮ್ಮಡಿಗೊಳಿಸಿ




## ಅಂಚೆ ಕಛೇರಿ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ಗಳು

6ನೇಯ ಮತ್ತು 7ನೇಯ ಮಾಲಿಕೆ

- 12% ಬಡ್ಡಿ : ಸರಕಾರ ನೀಡುತ್ತಿರುವ ಅತ್ಯಂತ ಹೆಚ್ಚಿನ ದರ; 6 ವರ್ಷಗಳಲ್ಲಿ ನಿಮ್ಮ ಉಳಿತಾಯವನ್ನು ಇಮ್ಮಡಿಗೊಳಿಸುವುದು.
- ಆದಾಯ ತೆರಿಗೆ ವಿನಾಯಿತಿ : ವರ್ಷಕ್ಕೆ ರೂ. 3000 ದವರೆಗೆ ಬಡ್ಡಿಯ ಮೇಲೆ.
- ಸಂಪತ್ತು ತೆರಿಗೆ ವಿನಾಯಿತಿ : ರೂ. 1,50,000ದವರೆಗಿನ ಮೊತ್ತದ ಮೇಲೆ.
- ಮಾನ್ಯತೆ ಪಡೆದ ಆಧಾರ ಪತ್ರ : ಬ್ಯಾಂಕುಗಳು ಸರ್ಟಿಫಿಕೇಟನ್ನು ಆಧಾರ ಪತ್ರವನ್ನಾಗಿ ಸ್ವೀಕರಿಸಿ, ಅದರ ಮೌಲ್ಯದ 75% ಭಾಗವನ್ನು ಸಾಲವಾಗಿ ನೀಡುತ್ತವೆ. ಹಾಗು, ಕಂಟ್ರಾಕ್ಟರುಗಳು ಆಧಾರ ಪತ್ರವನ್ನಾಗಿ ನೀಡಬಹುದು



ಮೇಲಿನ ಲಾಭದಾಯಕ ಅಂಶಗಳಲ್ಲದೆ, ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್ ಯೋಜನೆಯ ಇತರ ಸೌಲಭ್ಯಗಳು :

* ಸುಲಭ — ಯಾವುದೇ ಅಂಚೆ ಕಛೇರಿಯಲ್ಲಿ ಸರ್ಟಿಫಿಕೇಟ್‌ಗಳನ್ನು ನೀವು ಕೊಳ್ಳಬಹುದು. ನೀವು ಠೇವಣಿ ಇಡುವ ಮೊತ್ತಕ್ಕೆ ಯಾವುದೇ ಮಿತಿ ಇಲ್ಲ. ಇತರರ ಸಹಭಾಗಿತ್ವದೊಂದಿಗೆ ಅಥವಾ ವೈಯಕ್ತಿಕವಾಗಿ.

* ಅನುಕೂಲ — 3 ವರ್ಷಗಳ ನಂತರ ನಿಮ್ಮ ಠೇವಣಿಯನ್ನು ಬಡ್ಡಿ ಸಮೇತ ಹಿಂದೆಗೆದುಕೊಳ್ಳಬಹುದು.

* ಕೋರ್ಟ್ ವ್ಯವಹಾರಗಳಿಂದ ದೂರ – ಅನಿರೀಕ್ಷಿತ ಮರಣದ ಸಂದರ್ಭಕ್ಕೆಂದು, ನಾಮಕರಣ ಮಾಡಬಹುದು. ಕಾಲ ಮತ್ತು ಹಣವನ್ನು ವ್ಯಯಮಾಡುವ ಮೊಕದ್ದಮೆಗಳ ತೊಂದರೆಯಿರುವುದಿಲ್ಲ.

6ನೇ ಮಾಲಿಕೆಯಲ್ಲಿ, 12% ದರದಲ್ಲಿ ನಿಮ್ಮ ಚಕ್ರಬಡ್ಡಿ ಕೂಡಿಕೊಳ್ಳುತ್ತಿರುವುದು. ಆರು ವರ್ಷಗಳ ನಂತರ ಒಟ್ಟು ಮೊತ್ತ ನಿಮ್ಮ ಕೈಸೇರುವುದು.

7ನೇ ಮಾಲಿಕೆಯಲ್ಲಿ 12% ದರದಲ್ಲಿ ಪ್ರತಿ 6 ತಿಂಗಳಿಗೊಮ್ಮೆ ನಿಮ್ಮ ಬಡ್ಡಿಯನ್ನು ಪಡೆಯಬಹುದು. ಆರು ವರ್ಷಗಳ ನಂತರ ನಿಮ್ಮ ಅಸಲನ್ನು ಹಿಂದಿರುಗಿಸಲಾಗುವುದು.

| ಆರನೇ ಮಾಲಿಕೆ | | ಏಳನೇ ಮಾಲಿಕೆ | |
|---|---|---|---|
| ವರ್ಗ (ರೂ.) | 6 ವರ್ಷಗಳನಂತರದ ಒಟ್ಟು ಮೊತ್ತ(ರೂ.) | ವರ್ಗ (ರೂ.) | 6 ತಿಂಗಳಿಗೊಮ್ಮೆ ಬಡ್ಡಿ (ರೂ.) |
| 10 | 20.15 | | |
| 50 | 100.75 | | |
| 100 | 201.50 | 100 | 6 |
| 500 | 1007.50 | 500 | 30 |
| 1000 | 2015.00 | 1000 | 60 |
| 5000 | 10075.00 | 5000 | 300 |

ನಿಮ್ಮ ಇಂದಿನ ಮತ್ತು ಮುಂದಿನ ಜೀವನ — ಎರಡು ದೃಷ್ಟಿಯಿಂದಲೂ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್ ಲಾಭದಾಯಕ ಮತ್ತು ಸುರಕ್ಷಿತ.

ವಿವರಗಳಿಗೆ :

- ಯಾವುದೇ ಅಂಚೆ ಕಛೇರಿ
- ಅಧಿಕೃತ ಏಜೆಂಟ್
- ಉಳಿತಾಯ ಅಧಿಕಾರಿ
  c/o ಜಿಲ್ಲಾಧಿಕಾರಿಗಳ ಕಛೇರಿ



ಸಣ್ಣ ಉಳಿತಾಯಗಳ ನಿರ್ದೇಶನಾಲಯ

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

### ನಾವು ಮತ್ತು 'ನಮ್ಮ ಕಸ್ತೂರಿ'

'ಕಸ್ತೂರಿ'ಗೆ ರಜತ ವರ್ಷದ ಈ ಸಂದರ್ಭದಲ್ಲಿ ನನ್ನ ಮತ್ತು ಮನೆ ಜನರ ಹಾರ್ದಿಕ ಶುಭಾ–ಶಯಗಳು. ಕನ್ನಡ ಸಾಹಿತ್ಯದ ಅಭ್ಯಾಸಿಯೂ ಕಾಲೇಜೊಂದರಲ್ಲಿ ಇಂಗ್ಲಿಷ್ ಅಧ್ಯಾಪಕನೂ ಆಗಿರುವ ನನಗೆ ಓದುವ ಗೀಳು ಹಿಡಿಸಿದ್ದು ನನ್ನ ಅಪ್ಪ. ಅವರ ಎರಡು ಹವ್ಯಾಸಗಳೆಂದರೆ ಡಾ. ಕೋಟ ಶಿವರಾಮ ಕಾರಂತರು ಬರೆದ ಎಲ್ಲಾ ಪುಸ್ತಕಗಳನ್ನು ಕ್ರಯಕ್ಕೆ ಕೊಳ್ಳುವುದು ಮತ್ತು ತಪ್ಪದೆ ಪ್ರತಿ ತಿಂಗಳೂ 'ಕಸ್ತೂರಿ'ಯನ್ನು ಕೊಂಡು ತಂದು, ಆರು ಕಸ್ತೂರಿಗಳಿಗೆ ಒಂದರಂತೆ ಬುಕ್ ಬೈಂಡ್‌ಮಾಡಿ ಇಡುವುದು. ಹಾಗೆ 'ಕಸ್ತೂರಿ'ಯ ಒಂದನೇ ಸಂಚಿಕೆಯಿಂದ ಇಂದಿನವರೆಗೆ ಎಲ್ಲಾ ಪ್ರತಿಗಳು ನಮ್ಮಲ್ಲಿ ಬುಕ್ ಬೈಂಡ್ ಆಗಿವೆ.

ಶಿವರಾಮ ಕಾರಂತರು ಬರೆದದ್ದೆಲ್ಲಾ ಓದಬೇಕೆಂದು ಪ್ರಾರಂಭದಲ್ಲಿ ನನ್ನ ಅಪ್ಪನ ಹಠ. ಓದಿದೆ. ಈಗ ಬೆಳೆದ ಮೇಲೆ ತಿಳಿಯುತ್ತದೆ ನನಗಾದ ಲಾಭ. ಚರಿತ್ರೆ, ವಿಜ್ಞಾನ, ಶಿಲ್ಪ–ಕಲೆ, ಹೀಗೆ ಎಲ್ಲಾ ವಿಷಯಗಳಲ್ಲೂ ಆಸಕ್ತಿ. ಸಾಹಿತ್ಯದ ಅಧ್ಯಯನಕ್ಕೆ ಸಹಕಾರಿಯಾಗುವ ಈ ಆಸಕ್ತಿಗೆ ಪೂರಕವಾಗಿ ನಮಗೆ ಸಹಕರಿಸಿದ್ದು 'ಕಸ್ತೂರಿ.' ನಾನೊಬ್ಬ ಸಾಮಾನ್ಯ ಮನುಷ್ಯ–ನಿರಬಹುದು, ಆದರೆ ನನಗಾದ ಲಾಭ ದೊಡ್ಡದು.

ನಾನು 'ಚಂದಮಾಮ' ಓದುವುದನ್ನು ನಿಲ್ಲಿಸಿದೊಡನೆ ಪ್ರಾರಂಭಿಸಿದ್ದು 'ಕಸ್ತೂರಿ' ಓದುವುದನ್ನು. ಅಥವಾ 'ಕಸ್ತೂರಿ' ಓದುತ್ತಾ 'ಚಂದಮಾಮ' ಕಡಿಮೆಯಾಗಿ ಕೊನೆಗೆ ನಿಂತೇ ಹೋಯಿತು. ನನಗೂ ನನ್ನ ತಮ್ಮನಿಗೂ 'ಚಂದಮಾಮ' ಮೊದಲು ಓದುವುದಕ್ಕಾಗಿ ಜಗಳವಾಗುತ್ತಿದ್ದ ಹಾಗೆ, 'ಕಸ್ತೂರಿ'ಗಾಗಿ ನನಗೂ ನನ್ನ ಅಪ್ಪನಿಗೂ ಚರ್ಚೆ ಶುರುವಾಯಿತು. ಈಗಲೂ ನೆನಪಿದೆ, ಅಂಗಡಿಯಿಂದ ಹೊಸ 'ಕಸ್ತೂರಿ' ಬಂದ ಹಾಗೆ, ಅಪ್ಪ ಸಹಚಿಂತನ, ಇದುವೆ ಜೀವ ಇದು ಜೀವನ, ನಿಮ್ಮ ಶಬ್ದಭಾಂಡಾರ ಬೆಳೆಯಲಿ ಇಷ್ಟನ್ನು ಓದಿ ನನಗೆ ಕೊಡಬೇಕು. ನನ್ನ ಅಪ್ಪ 'ಕಸ್ತೂರಿ'ಯಲ್ಲಿ ಓದಿಯಾದ ಲೇಖನಗಳಿಗೆಲ್ಲಾ 'ಈ ಸಂಚಿಕೆಯಲ್ಲಿ' ಕಾಲಮ್ಮಿನಲ್ಲಿ ಚಿಕ್ಕ ಗುರುತು ಮಾಡುತ್ತಿದ್ದರು. ಅಪ್ಪನಿಗಿಂತ ಮೊದಲು ಓದಬೇಕೆಂಬ ತವಕ ಆಗ.

ಈ ಬೇರೆ ಕೆಲವು ಇಂಗ್ಲಿಷ್ ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆದ ನಂತರ, ಮೊದಲಿನ ಹಾಗೆ ಹುಚ್ಚುಕಟ್ಟಿ 'ಕಸ್ತೂರಿ'ಯನ್ನು ನಾನು ಓದುತ್ತಾ ಇಲ್ಲ. ಮೊದಲಿನ ಹಾಗೆ 'ಕಸ್ತೂರಿ'ಗಾಗಿ ಕಾಯುವುದಿಲ್ಲ. ಒಂದು ತಿಂಗಳೊಳಗೆ ಒಮ್ಮೆ ಓದಿಮುಗಿಸುತ್ತೇನಷ್ಟೆ. ಆದರೆ ನಾನು ತವಕದಿಂದ 'ಕಸ್ತೂರಿ'ಯನ್ನು ಕಾಯುತ್ತಿದ್ದ ದಿನಗಳನ್ನು, 'ಕಸ್ತೂರಿ' ಒಂದು ಹಂತದಲ್ಲಿ ನನಗೆ ಬಹಳ ಕಲಿಸಿದ್ದನ್ನು ಮಾತ್ರ ನಾನು ಮರೆಯುವ ಹಾಗಿಲ್ಲ. ನನ್ನ ಅಪ್ಪ ರಟ್ಟು ಹಾಕಿಸಿ, ರಕ್ಷಿಸಿಟ್ಟ ಹಳೆಯ 'ಕಸ್ತೂರಿ'ಗಳ ಒಳ್ಳೆಯ ಲೇಖನಗಳನ್ನೆಲ್ಲಾ ಇನ್ನೊಮ್ಮೆ ಬಿಡುವು ಮಾಡಿಕೊಂಡು ಓದಬೇಕು ಎಂಬ ಆಸೆ ನನಗಿನ್ನೂ ಇದೆ.

ಕಲ್ಯಾಣಪುರ —ವಿಜಯ ಶಂಕರ

### ನನ್ನ ಸಂಗಾತಿ

ವಿದ್ಯಾರ್ಥಿ ದೆಸೆಯಿಂದಲೆ 'ಕಸ್ತೂರಿ' ನನ್ನ ಗಮನ ಸೆಳೆಯಿತು. ಅದು ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವ ಬಗೆ ನನಗೆ ತುಂಬ ಹಿಡಿಸಿದೆ. ವೈಜ್ಞಾನಿಕ ವಿಷಯಗಳಲ್ಲಿ ಆಸಕ್ತಿಹೊಂದಿ–ರದ ನನ್ನಲ್ಲಿ ಆ ಓದನ್ನು ಅದು ಪ್ರಚೋದಿಸಿದೆ. ನನ್ನ ನೂರಾರು ವಿದ್ಯಾರ್ಥಿಗಳಿಗೆ 'ಕಸ್ತೂರಿ'ಯಿಂದ ಪಡೆದುದನ್ನು ಈ ಎಲ್ಲ ವರ್ಷ ಹಂಚಿರುವೆ. ನನ್ನ ವಿರಾಮದ ವೇಳೆಯಲ್ಲಿ 'ಕಸ್ತೂರಿ'ಯ ಹಳೆಯ ಸಂಚಿಕೆಗಳು ನನ್ನ ಸಂಗಾತಿಗಳಾಗಿವೆ. ಅದರ ೩೦೧ ಸಂಚಿಕೆಗಳನ್ನು ನನ್ನ ಜೀವ–ವಿಮಾ ಪಾಲಿಸಿಗಳಷ್ಟೆ ಜೋಪಾನವಾಗಿ ಇಟ್ಟಿದ್ದೇನೆಂದರೆ ನಂಬುತ್ತೀರಷ್ಟೆ.

ಇಂದು ಬರೆಹಗಾರನಾಗಿ, ನಾನು 'ಕಸ್ತೂರಿ'ಯ ಬರೆಹಗಳನ್ನು ಇನ್ನಷ್ಟು ಆಳವಾಗಿ ಅವಲೋ–ಕಿಸುತ್ತಿರುವೆ. 'ಮಟ್ಟ' ಕಾಯ್ದುಕೊಳ್ಳುವಲ್ಲಿ ನಿಮ್ಮ ಶ್ರಮ ಶ್ಲಾಘನೀಯ. ದಯವಿಟ್ಟು, ಇನ್ನಷ್ಟು ಶ್ರಮಿಸಿ. ಹಾಂ, ತಿಂಗಳ ಸಂಬಳಕ್ಕಿಂತಲೂ ಹೆಚ್ಚಾಗಿ, 'ಕಸ್ತೂರಿ'ಯ ಬರುವಿಕೆಗಾಗಿ

ಹಂಬಲಿಸುವಂತೆ ಅದು ನನ್ನನ್ನು ಇಟ್ಟಿದೆ, ರೂಪಿಸಿದೆ. ಈ ಅನುಭವ ಹಲವರದಾಗಿರಲು ಸಾಕು. ಅಭಿನಂದನೆಗಳು.

ಅಂಕೋಲಾ (ಉ. ಕ.) —ವಿ. ಎ. ಜೋಶಿ

**ಮರಣೋತ್ತರ ?**

'ಕಸ್ತೂರಿ'ಯ ರಜತ ಸಂಚಿಕೆಯಲ್ಲಿ ಪ್ರಕಟವಾದ ಸಂತೋಷಕುಮಾರ ಗುಲ್ವಾಡಿಯವರ, 'ನನ್ನ ಮರಣೋತ್ತರ' ಲೇಖನ ಓದಿದೆ. ಗುಲ್ವಾಡಿಯವರು ಹೃದಯದ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ಬಳಿಕದ ತಮ್ಮ ಅನುಭವವನ್ನು ಸ್ವಾರಸ್ಯಕರವಾಗಿ ಓದುಗರಿಗೆ ಹಂಚಿದ್ದಾರೆ. "ಸಾವೂ ಸುಂದರವೆ. ಆದರೂ, ಅದಿನ್ನೂ ಪರಿಹಾರ ಕಾಣದ ಚಿದಂಬರ ರಹಸ್ಯ. ಅದು ಒಂದು ಕೊನೆಯಲ್ಲ. ಒಂದು ಹೊಸ ಪಯಣದ ಆರಂಭ," ಎಂಬ ಅಂಶದ ಕಡೆಗೆ ಜನರ ದೃಷ್ಟಿ ಹರಿಯುವಂತೆ ಮಾಡಿದ್ದಾರೆ. ಆದರೂ ಅವರ 'ಮರಣೋತ್ತರ ಅನುಭವ' ಸಾಕಷ್ಟು ಜಿಜ್ಞಾಸೆ, ಊಹೆ, ಕಲ್ಪನೆಗಳಿಗೆ ಅವಕಾಶಮಾಡಿಕೊಟ್ಟಿದೆ. ಪ್ರಾಯಶಃ ಅವರ ಅನುಭವವನ್ನು ಇದ್ದಕ್ಕಿದ್ದಂತೆ ಸತ್ಯ ಪ್ರಮಾಣವಾಗಿ, ಪ್ರಾಮಾಣಿಕ ವರದಿಯಾಗಿ ಸ್ವೀಕರಿಸುವದು ಕಷ್ಟವಾಗಬಹುದೇನೋ.

ಗುಲ್ವಾಡಿಯವರು ತಮ್ಮ ಮರಣೋತ್ತರ ಅನುಭವಗಳ ಬಗ್ಗೆ ಹೇಳ ಹೊರಟು ಲೇಖನದ ಬಹುಭಾಗದಲ್ಲಿ ತಾವಿದ್ದ ಆಸ್ಪತ್ರೆಯ ಸ್ಥಿತಿಗತಿ, ತಮಗೆದುರಾದ ಅವಜ್ಞೆ, ವೈದ್ಯಕೀಯದ ನೀತಿ ಸಂಹಿತೆ, ಡಾಕ್ಟರರ ಹಿಪೊಕ್ರೆಟ್ಸ್ ಪ್ರತಿಜ್ಞೆ—ಇತ್ಯಾದಿಗಳ ಬಗ್ಗೆ ಬರೆದುದು ವಿಷಯಾಂತರವೆನ್ನಿಸಿದ್ದು ಮಾತ್ರವಲ್ಲ, ಅಪ್ರಾಸಂಗಿಕ ಹಾಗೂ ಅನಪೇಕ್ಷಣೀಯವಾಗಿಯೂ ಕಂಡಿತು.

ಬಾಳಿಲ —ಸಿ. ಎಚ್. ಕೃಷ್ಣಶಾಸ್ತ್ರಿ

ರಜತೋತ್ಸವ ಸಂಚಿಕೆಯಲ್ಲಿಯ ಸಂತೋಷಕುಮಾರ ಗುಲವಾಡಿಯವರ 'ನನ್ನ ಮರಣೋತ್ತರ' ಓದಿದೆ. ಮನುಷ್ಯ ಸತ್ತ ಎಂದು ಸಾರುವುದು ಆತನ ಎಲ್ಲ ಅಂಗಗಳೂ ಕೆಲಸ ನಿಲ್ಲಿಸಿದಾಗಲೇ. ಗುಲ್ವಾಡಿಯವರು ತಾವು 'ಸತ್ತೆ' ಎಂದು ಭಾವಿಸಿಕೊಂಡಾಗ ಅವರ ಮೆದುಳು ಇನ್ನೂ ಕೆಲಸ ನಿಲ್ಲಿಸಿರಲೇ ಇಲ್ಲ. ಬ್ರೇನ್ ಸೆಲ್ಸ್ ಸತ್ತರೆ ಮನುಷ್ಯನ ಮೃತ್ಯು ಖಂಡಿತ. ಇಲ್ಲಿ ಅವರ ಮೆದುಳು ತನ್ನಲ್ಲಿನ ಉಳಿದ ಶಕ್ತಿಯಿಂದ ಅವರಲ್ಲಿ ಭ್ರಮೆಯುಂಟುಮಾಡಿತು. ಅವರ ಮಿದುಳು ಸತ್ತಿದ್ದರೆ ತಕ್ಷಣ ಅವರ ಕಾಲ್ಪನಿಕ ಆತ್ಮವೂ ಮಾಯವಾಗಿರುತ್ತಿತ್ತು.

ಚಿಕ್ಕಮಗಳೂರು —ಬಿ. ವಿವೇಕ

ಶ್ರೀ ಸಂತೋಷಕುಮಾರರು ಸತ್ತು ಬದುಕಿದ ಲೇಖ ಬಹಳ ವಿಚಿತ್ರ. ಅವರ ಸಾವಿನ ಸುಖ, ಇತರರಿಗೆ ಒಂದು ಸ್ವಪ್ನ. ಅನುಭವ ನಮ್ಮದಾದಾಗ ಮಾತ್ರ ನಂಬಿಕೆ ಸಾಧ್ಯ. ಈ ಘಟನೆಯನ್ನು 'ಸಾವು' ಎಂದು ದೃಢೀಕರಿಸಲು ಹೇಗೆ ಸಾಧ್ಯ? ಹೃದಯರೋಗಿಯೊಬ್ಬನ ಪಾಲಿಗೆ ಸಾವು ಕಂಡದ್ದು ಸ್ವಪ್ನವಾಗಬಾರದೆಂದಿಲ್ಲ. ಪವಾಡ ಕುರಿತು ಕುಮಾರರ ವ್ಯಾಖ್ಯಾನ ಬಹಳ ಸೊಗಸು. ಇದು ಬದುಕಿನ ಬರವಣಿಗೆಯಲ್ಲೊಂದು ಆಟದ ಬೇಟೆ ಎಂದೆನಿಸೀತೆ?

ಬೆಳ್ಳಾರೆ (ದ.ಕ.) —ಪ್ರೊಫೆಸರ್ ರಾವ್ ಕುತ್ಯಾಡಿ

**ಸಂತಸ ತಂದ ಸಂಚಿಕೆ**

'ಕಸ್ತೂರಿ' ರಜತ ಸಂಚಿಕೆಯನ್ನು ಕೈಗೆತ್ತಿಕೊಂಡಾಗ ತುಂಬ ಸಂತಸವಾಯಿತು.

ಸಂತೋಷಕುಮಾರ ಗುಲ್ವಾಡಿಯವರ ಲೇಖನ 'ನನ್ನ ಮರಣೋತ್ತರ' ಓದಿದಾಗ ಇನ್ನೂ ಮನದಲ್ಲಿ ಹಸಿರಾಗಿರುವ ಅವರ ಲೇಖನ 'ನಾನು ಹೃದಯ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡೆ'ಯನ್ನೇ ಮುಂದುವರಿಸುತ್ತಿದ್ದೇನೆಯೊ ಎಂದು ಅನಿಸಿತು.

ಪಾಮೆಂ. 'ಕಸ್ತೂರಿಯೊಡನೆ...' ಲೇಖನ ತುಂಬ ಮುದವನ್ನು ನೀಡಿತು. 'ಕಸ್ತೂರಿ'ಯೊಡನೆ ಅವರು ಎಷ್ಟೊಂದು ಹೊಂದಿಕೊಂಡಿದ್ದರೆಂಬುದನ್ನು ಅದರಿಂದ 'ಕಸ್ತೂರಿ'ಗಾದ ಆನಂದವನ್ನು ಅವರು ನಮ್ಮೊಡನೆ ಹಂಚಿಕೊಂಡಿದ್ದಾರೆ.

ಪುಸ್ತಕ ವಿಭಾಗದ 'ಆ ಕ್ಯೂನ ಸತ್ಯಕಥೆಗೆ' ಪೀಠಿಕೆಯಾಗಿ ಪರಿಚಯ ಬರೆದಿರುವ ದಿ. ವೆಂಕಟರಾಜ ಪಾನಸೆಯವರ ಬಗ್ಗೆ ಚೌಕಟ್ಟಿನಲ್ಲಿ ಹತ್ತು ಸಾಲು ಕೊಡಬಹುದಿತ್ತು.

ಅಗಸೂರು —ಅಗಸೂರು ಮೋಹನ ಭಟ್

## ನಾನು ಮತ್ತು ಹೋಮಿಯೋ...

ರಜತೋತ್ಸವ ಸಂಚಿಕೆಯನ್ನು ಸರ್ವಾಂಗ ಸುಂದರವಾಗಿ ಹೊರತಂದಿದ್ದೀರಿ. ನನ್ನನ್ನು ವಿಶೇಷತಃ ಸೆಳೆದದ್ದು ಕೃಷ್ಣಮೂರ್ತಿ ಕಿತ್ತೂರರ 'ಹೋಮಿಯೋ ಚಿಕಿತ್ಸೆ...' ನಾನು ಬಹಳ ಕಾಲ ನನ್ನ ಅಂಗಾಲು ಸೀಳುಗಳಿಗೆ ಬೇರೆಲ್ಲ ಔಷಧ ಬಳಸಿ ಬೇಸತ್ತು ಕೊನೆಗೆ ಹೋಮಿಯೋ ಚಿಕಿತ್ಸೆ ಪಡೆದು ಅದರಿಂದ ಮುಕ್ತಿ ಕಂಡೆ.

ಪ್ರಸ್ತುತ ಲೇಖನದಲ್ಲಿ ಆಗಾಗ ಚಹ ಕಾಫಿ ಸೇವನೆಯ ಪ್ರಸ್ತಾಪ ಬಂದಿದೆ. ಈ ಪೇಯಗಳು ಹಾಗೂ ಧೂಮ್ರಪಾನಗಳು ರೋಗಿಯಲ್ಲಿ ಹೋಮಿಯೋ ಔಷಧಗಳ ಪರಿಣಾಮವನ್ನು ಕುಂಠಿತಗೊಳಿಸುತ್ತವೆ. ಅಲ್ಲದೆ ಈ ಔಷಧಗಳನ್ನು ಪರಿಮಳಯುಕ್ತ ವಸ್ತುಗಳ ಬಳಿ ಇರಿಸ ಕೂಡದು ಎಂದು ಕೇಳಿದ್ದೇನೆ. ಇದು ನಿಜವೆ? ನಿಜವಿದ್ದರೆ ಯಾಕೆ ಎಂದು ಶ್ರೀ ಕಿತ್ತೂರರು ದಯವಿಟ್ಟು ತಿಳಿಸಬೇಕು.

ಚಿಟಗುಪ್ಪ —ಪಿ. ಸ್ಯಾಮುಎಲ್

'ಕಸ್ತೂರಿ' ರಜತೋತ್ಸವ ಸಂಚಿಕೆಯಲ್ಲಿ ಪ್ರಕಟವಾದ ಕೃಷ್ಣಮೂರ್ತಿ ಕಿತ್ತೂರ ಅವರ 'ಹೋಮಿಯೋ ಚಿಕಿತ್ಸೆ: ಒಂದು ಮರೆಯಲಾಗದ ಅನುಭವ' ಲೇಖನ ನಿಜಕ್ಕೂ ಚೇತೋ-ಹಾರಿಯಾಗಿತ್ತು. ಓದುತ್ತಾ ಹೋದಂತೆ ಜನಗಳಿಗೆ, [ವಿಶೇಷತಃ ಸುಶಿಕ್ಷಿತ] ವರ್ಗಕ್ಕೆ, ಕಣ್ಣು ತೆರೆಸುವ ಈ ಲೇಖನ ಪ್ರಕಟಿಸಿದ ನಿಮಗೆ ಧನ್ಯವಾದಗಳು, ಅಂತೆಯೇ ಲೇಖಕರಿಗೆ.

ತಮ್ಮ ರಜತೋತ್ಸವ ಸಂಚಿಕೆ ನಾವು ನಿರೀಕ್ಷಿ-ಸಿದಂತೆಯೇ ಸರ್ವಾಂಗ ಸುಂದರವಾಗಿ ಮೂಡಿ ಬಂದು ಜೀವನದ ಎಲ್ಲ ರಂಗಗಳನ್ನು ಪರಿ-ಚಯಿಸುವ ಲೇಖನಗಳನ್ನೊಳಗೊಂಡು ನಮ್ಮ ಕೈಸೇರಿ, ಕೊಟ್ಟ ಹಣವನ್ನು ಸಾರ್ಥಕಗೊಳಿಸಿದೆ.

ರಾಣೆಬೆನ್ನೂರು —ಜಿ. ಆರ್. ಗೌಡ

## ನಮನ

'ಕಸ್ತೂರಿ'ಯು ರಜತೋತ್ಸವ ಸಂಚಿಕೆ ಚೆನ್ನಾಗಿ ಬಂದಿದೆ. ಶುಭ ಹಾರೈಕೆಗಳು. 'ಕಸ್ತೂರಿ'ಯಿಂದ ಮಟ್ಟವನ್ನೂ ನಿರೀಕ್ಷಿಸುತ್ತಿರುವದು ಅತ್ಯಂತ ಸ್ವಾಭಾವಿಕ ವಿಚಾರ. ಏಕೆಂದರೆ 'ಕಸ್ತೂರಿ'ಯೊಂದೆ ಕನ್ನಡದ ವಿಶಿಷ್ಟ ಮಟ್ಟದ ಪತ್ರಿಕೆ. ಹೆಮ್ಮೆಯ ಪತ್ರಿಕೆ. ಅದರ ಬ್ರಹ್ಮ ಪಾವೆಂ. ಅವರಿಗೆ ನನ್ನ ನಮನಗಳು. ಅವರ ನಿಗರ್ವಿ ಲೇಖನ, ಅವರ ಕೀರ್ತಿಗೆ ಇನ್ನೊಂದು ದಾರಿ.

ಕಡವಾಡ —ಶಿವಾನಂದ ಹಬ್ಬಾರ

## 'ಯಾರು?'

ನಾನು ೭ನೆಯ ವರ್ಗದ ವಿದ್ಯಾರ್ಥಿ. ನನಗೆ 'ಯಾರು?' ಬಗ್ಗೆ ಒಂದು ಸಂದೇಹ ಬಂದಿರುತ್ತದೆ. ಅದರ ಕೊನೆಯಲ್ಲಿ ನೀವು ಬರೆದದ್ದು 'ಮಹೇಶ, ಅಭಿವೃದ್ಧಿ ಅಧಿಕಾರಿ, ನಾಂಪು, ಮೋಮಲ್ ದ್ವೀಪ, ಭಾರತ' ಎಂಬ ವಿಳಾಸವು ನಿಜವಾದದ್ದೊ ಅಥವಾ ಕಲ್ಪನೆಗಾಗಿ ಲೇಖಕರು ಬರೆದದ್ದೊ ?

ಚಿಪ್ಪಾರ (ಕೇರಳ) —ಮುರಲೀಧರ ಕೆ. ಎಸ್.

[ಇದು ಕಾಲ್ಪನಿಕ ಕಥೆಯೆಂಬುದು ಸ್ಪಷ್ಟ ವೇದ್ಯವಿದೆಯಲ್ಲ. —ಸಂ.]

'ರಜತೋತ್ಸವ ಸಂಚಿಕೆ'ಯಲ್ಲಿ ಪ್ರಕಟವಾದ ರಾಜಶೇಖರ ಭೂಸನೂರಮಠರ 'ಯಾರು?' ಕುತೂಹಲಕಾರಿ ಕತೆ(ಲೇಖನ?). ಇದರಲ್ಲಿ ಮಂಕಾ ಆದಿವಾಸಿಗಳ ಜೀವನ **Ufology** (ಹಾರುವ ತಟ್ಟೆಗಳ ಕುರಿತು) ಘಟನೆಗಳನ್ನು ಅಳವಡಿಸಿರುವದರಿಂದ ರಸವತ್ತಾಗಿ ಮೂಡಿ ಬಂದಿದೆ. ಆದರೆ ಆ ದ್ವೀಪಕ್ಕೆ 'ಮೋಮಲ್' ಎಂಬ ಹೆಸರು ಬರಲು ಕಾರಣವೇನೆಂಬುದನ್ನು ಚಕ್ರವರ್ತಿ ತಿಳಿಸಬೇಕಿತ್ತು.

ಕೆ.ಆರ್.ನಗರ —ಚಿಕ್ಕನಾಯ್ಕನಹಳ್ಳಿ ವೈ.ಕುಮಾರ್

## ಯಾರಿಗೆ? ದೇವರಿಗೆ?

ಸಪ್ಟಂಬರ್ ತಿಂಗಳ 'ಕಸ್ತೂರಿ'ಯಲ್ಲಿ 'ಯಾರಿಗೆ ಬೇಕು ಈ ಭಾರತ?' ಶೀರ್ಷಿಕೆಯಡಿಯಲ್ಲಿ ಸಂಪಾದಕರ ಮೂರು ಪ್ರಶ್ನೆಗಳಿಗೆ ನಾಡಿನ ಕೆಲವು ಹೆಸರಾಂತ ಬುದ್ಧಿಜೀವಿಗಳ ಉತ್ತರ ಓದಿದೆ. ಒಂದು ದೌರ್ಭಾಗ್ಯದ ಸಂಗತಿ ಎಂದರೆ ಪ್ರಸ್ತಾ-ಪಿಸಲ್ಪಟ್ಟ ಸಮಸ್ಯೆಗಳಿಗೆ ಅವರಲ್ಲಿ ಒಮ್ಮತದ ಅಭಿಪ್ರಾಯವಿಲ್ಲದಿರುವುದು.

ಶಂ. ಬಾ. ಜೋಶಿಯವರಂಥ ಮೇಧಾವಿಗಳಿಗೆ ಈ ದೇಶವನ್ನು 'ಹಿಂದೂಸ್ತಾನ'ವೆಂದು ಕರೆಯುವುದೇ ಒಂದು ಮಡಿವಂತಿಕೆ ಎಂಬ ಭಯ ಕಾಡುತ್ತಿದ್ದರೆ, ಚಂದ್ರಶೇಖರ ಪಾಟೀಲರಂತಹ

ನವ ವಿಚಾರವಾದಿಗಳಿಗೆ ಈ ದೇಶವನ್ನು ಒಂದು ಮಾಡಿದ 'ಹಿಂದೂ ಸಂಸ್ಕೃತಿ'ಯೇ ತುಚ್ಛವಾದ ಸ್ವಾಭಿಮಾನ ಎನಿಸಿದರೆ ನಮ್ಮ ದೇಶವನ್ನು ದೇವರೇ ಕಾಪಾಡಬೇಕು! 'ಯಾರಿಗೆ ಬೇಕು ಈ ಭಾರತ?' ಎಂಬ ಪ್ರಶ್ನೆ ಇಂತಹ ಬುದ್ಧಿಜೀವಿಗಳೆನಿಸಿಕೊಂಡವರ ಸಲುವಾಗಿಯೇ ಕೇಳಿರುವಂತಿದೆಯಲ್ಲವೇ?

ಇನ್ನು ಸಮಸ್ಯೆಯನ್ನು ವಾಸ್ತವಿಕ ನೆಲಗಟ್ಟಿನಲ್ಲಿ ವಿಮರ್ಶಿಸಿರುವವರೆಂದರೆ ಶ್ರೀರಂಗರು ಮತ್ತು ರಂ. ಶ್ರೀ. ಮುಗಳಿಯವರು. ಅಂತೆಯೇ ಚಿದಂಬರಾನಂದರ ಪರಿಹಾರಸೂತ್ರಗಳೂ ಸಮಯೋಚಿತವಾಗಿವೆ.

ಭದ್ರಾವತಿ –ಕೆ. ಎಸ್ಕೆ.

### ಕ್ರೀಡೆ-ರಾಜಕೀಯಗಳೂ ಬರಲಿ

'ಕಸ್ತೂರಿ' ತನ್ನ ೨೬ನೆಯ ವರ್ಷದಲ್ಲಿ ಕಾಲಿರಿಸಿದ್ದು ನಮಗೆಲ್ಲ ಅತ್ಯಂತ ಸಂತೋಷದ ಹೆಮ್ಮೆಯ ಸಂಗತಿ. ಇದರ ಪ್ರತಿಯೊಂದು ಸಂಚಿಕೆಗಳ ಸಂಗ್ರಹವೇ ಒಂದು ಅಪೂರ್ವ ಜ್ಞಾನಭಾಂಡಾರ.

ಆದರೂ ಇತ್ತೀಚೆಗೆ ಪುಸ್ತಕ ವಿಭಾಗವನ್ನು ಹೊರತುಪಡಿಸಿ ಹೆಚ್ಚು ಕಡಿಮೆ ೨–೩ ಕತೆಗಳೂ, ಅಷ್ಟೇ ಕವನಗಳೂ ಇರುತ್ತವೆ. ಕ್ರೀಡೆ ಮತ್ತು ರಾಜಕೀಯವನ್ನು ಕುರಿತಾದ ಲೇಖನಗಳು ಈ ಪುಟಗಳನ್ನು ಆಕ್ರಮಿಸಿದರೆ 'ಕಸ್ತೂರಿ'ಯ ಉದ್ದೇಶ ಸಫಲವಾಗಬಹುದು.

ನವಿಲುಗೋಣ (ಉ.ಕ.) –'ಅಜ್ಞಾನಿ'

### ಇನ್ನೂ ಎಷ್ಟು ದಿನ?

'ಕಸ್ತೂರಿ ರಜತೋತ್ಸವ ಸಂಚಿಕೆ' ಹೊರಕ್ಕೆ ಬಂದಿರುವುದು, ಎಲ್ಲರ ಕೈ ಸೇರಿರುವುದು ಸಂತಸದ ಸುದ್ದಿ. ನಮ್ಮ ಪ್ರೀತಿಯ ಡೈಜೆಸ್ಟ್ ಜಯಭೇರಿಯನ್ನು ಹೊಡೆಯುತ್ತ ಮುಂದೆ ಸಾಗಲಿ ಎಂಬುದೇ ನಮ್ಮ ಹಾರೈಕೆ. ಈ ತನಕ 'ಕಸ್ತೂರಿ,' ಕನ್ನಡಿಗರಿಗೆ ತಮ್ಮ ಶಬ್ದಭಾಂಡಾರ ಬೆಳಸಲು ಸಹಾಯ ಮಾಡಿದ್ದಲ್ಲದೇ ಮನೋವಿಕಾಸಕ್ಕೆ ಸಾಕಷ್ಟು ಅವಕಾಶಗಳನ್ನು ತನ್ನ ಅಯ್ದು ಪುಟಗಳ ಮೂಲಕ ವಸ್ತುಗಳನ್ನು ಒದಗಿಸುತ್ತಾ ಬಂದಿದೆ.

ಆದರೆ, (ಕ್ಷಮೆ ಕೇಳುತ್ತಾ) ಇಪ್ಪತ್ತೈದು ವರುಷಗಳು ಸಂದರೂ, 'ಕಸ್ತೂರಿ' ಇನ್ನೂ, ಸುಂದರ ರೂಪವನ್ನು ತಳೆದಿಲ್ಲವಲ್ಲಾ! ಇದಕ್ಕೆ ಇನ್ನೂ ೨೫ ವರುಷಗಳು ಉರುಳಬೇಕೆ? ಇಂದಿನ ದಿನಗಳಲ್ಲಿ ಪ್ರತಿಕೆಗಳಿಗೆ ಕೊರತೆ ಇಲ್ಲ. ಬರುವ ಪತ್ರಿಕೆಗಳು ಬಹಳ ದಿನ ಬದುಕಬೇಕೆಂಬ ಆಸೆ ಇದ್ದಂಥವೆ. ಅದಕ್ಕಾಗಿ ಅವುಗಳು ನಡೆಸುತ್ತಿರುವ ಭಗೀರಥ ಪ್ರಯತ್ನದ ಅರಿವು ಇರುವ ನನಗೆ ಕಾಲ ಮಿಂಚುವ ಮುನ್ನ 'ಕಸ್ತೂರಿ' ಪ್ರತಿ ಮಾಸವೂ ಅಚ್ಚ ಹೊಸದಾಗಿ ಬರುವಂತಾಗಲಿ ಎಂದೆನಿಸುತ್ತದೆ.

ಬೆಂಗಳೂರು –'ಅಭಿಮಾನಿ'

### ಬಯಕೆ

ಪುಟಗಟ್ಟಲೇ ಹೇಳಬೇಕೆಂಬುದನ್ನು ಒಂದು ರೇಖಾಚಿತ್ರ ವಿವರಿಸಬಲ್ಲದು. 'ಕಸ್ತೂರಿ'ಗೆ ೨೫ ವರ್ಷ ತುಂಬಿರುವ ಸಂಕೇತವಾಗಿ ರಾಮಕೃಷ್ಣ ರಚಿಸಿದ ರೇಖಾಚಿತ್ರ (ಪುಟ ೧೯೦ರಲ್ಲಿ) ಸಕಾಲಿಕ, ಸಾಂಕೇತಿಕ.

ಉತ್ತಮ ವಿಷಯಗಳಿಗೆ ಪೋಷಕವಾಗಿ, ಒಳ್ಳೆಯ ಗುಣ ಮಟ್ಟ ಕಾದುಕೊಂಡಿರುವ 'ಕಸ್ತೂರಿ' ಉತ್ತಮವಾದ ವ್ಯಂಗ್ಯಚಿತ್ರಗಳಿಗೂ ಆದ್ಯತೆ ನೀಡಲೆಂಬುದು ನಮ್ಮ ಬಯಕೆ.

ಕ್ಯಾತ್ಸಂದ್ರ –ಕುರುಬರಹಳ್ಳಿ ಕೆ. ಹೊನ್ನಪ್ಪ

### ಸಂಶಯ

ಸಪ್ಟಂಬರ್ ಸಂಚಿಕೆಯ 'ಸಹಚಿಂತನ'ದಲ್ಲಿ ಜಿ. ಎಸ್. ಉಬರಡ್ಕ ಅವರು ಬಿಜಿಎಲ್ ಬಗ್ಗೆ ಬರೆಯುತ್ತಾ, "ಬೇಂದ್ರೆಯವರ 'ಕತೆಯಾದಳು ಹುಡುಗಿ'ಯಂತೆ ಕೊನೆಗೆ ಕಥೆಯಾದರು ಸ್ವಾಮಿ..." ಎಂದಿದ್ದಾರೆ. ಆದರೆ 'ಕತೆಯಾದಳು ಹುಡುಗಿ' ಬೇಂದ್ರೆಯವರದಲ್ಲ, ಯಶವಂತ ಚಿತ್ತಾಲರ ಕಥೆ ಅದು.

ಮುಂಬಯಿ (ಮರೋಳಿ) –ರೈ ಶ್ರೀಧರ ಕೆ.

['ಕತೆಯಾದಳು ಹುಡುಗಿ' ಬೇಂದ್ರೆಯವರ ಒಂದು ಕವಿತೆ. ಚಿತ್ತಾಲರು ಅದನ್ನೇ ತಮ್ಮ ಕತೆಯ ತಲೆಬರಹವಾಗಿಸಿಕೊಂಡಿದ್ದಾರೆ. ಸಂ.]



# ಕಸ್ತೂರಿ

ವರ್ಷ : ೨೬ ಅಕ್ಟೋಬರ್ ೧೯೮೧ ಸಂಚಿಕೆ ; ೨

ಪ್ರಿಯರೆ,

ಇಪ್ಪತ್ತೈದು ವರ್ಷ 'ಕಸ್ತೂರಿ'ಯನ್ನು
ಅಭಿಮಾನದಿಂದ ಕಂಡಿದ್ದೀರಿ — ಓದುಗರಾಗಿ,
ಲೇಖಕರಾಗಿ, ಹಿತಚಿಂತಕರಾಗಿ.
ದೀಪಾವಳಿ ನಿಮಗೆಲ್ಲ ಶುಭ ತರಲಿ.

— ಸಂಪಾದಕ

# ನಮ್ಮ ದಾದಾ

**ಡಾ. ಎಂ. ಕೆ. ವೈದ್ಯ**

ದಾದಾ ನಮ್ಮ ಮನೆತನದಲ್ಲೇ ಹಿರಿಯರು. ನಮಗೆಲ್ಲ ಪೂಜ್ಯ ಸ್ಥಾನದಲ್ಲಿದ್ದವರು. ಅವರ ಬಳಿ ಸುಮ್ಮನೆ ಕುಳಿತಾಗಲೂ ಅವರ ಒಂದೊಂದು ಕೃತಿಯಿಂದಲೂ ಒಂದೊಂದು ಪಾಠ ಕಲಿಯಬಹುದಿತ್ತು. ಸಮಾಜಜೀವನದ ಅನೇಕ ಅಂಗಗಳಲ್ಲಿ ಅವರದು ಸಕ್ರಿಯ ಪಾತ್ರ. ಆದರೆ ಅವರು ತೀರ ನಿರ್ವ್ಯಸನಿಯೆಂಬುದು ಸರ್ವಶ್ರುತವಿತ್ತು.

ಒಮ್ಮೆ ನಾನವರ ಬಳಿಯಿದ್ದಾಗ ಅವರ ಅತ್ಯಂತ ನಂಬಿಗಸ್ಥ ಸಹಾಯಕ ವಾಸುದೇವ ನಾಮಾಲೆ ಬಂದವರೆ, "ದಾದಾ, ಹಿಂದೆ ನನ್ನ ಕಡೆಯಿಂದ ಎರಡು ಸಾವಿರ ರೂಪಾಯಿ ತೆಗೆದುಕೊಂಡಿದ್ದಿರಿ. ಆದರೆ ಅದನ್ನು ಯಾವ ಖಾತೆಗೆ ಹಚ್ಚಬೇಕೆಂದು ಹೇಳಲಿಲ್ಲ. ನೀವು ಹೇಳಿದರೆ ನಾನು ಬರೆದು ಬಿಡುತ್ತೇನೆ," ಎಂದರು.

ದಾದಾ ಒಮ್ಮೆಲೆ ರೇಗಿ, "ನಾನದನ್ನು ನನ್ನ ವ್ಯಸನಕ್ಕಾಗಿ ಖರ್ಚು ಮಾಡಿದ್ದೇನೆ. ಅದರ ಲೆಕ್ಕವನ್ನು ನಾನು ನಿಮಗೆ ಕೊಡಬೇಕೆ? ನಿಮಗೆ ಹೇಗೆ ಬೇಕಾದರೂ ಬರೆಯಿರಿ," ಎಂದುಬಿಟ್ಟರು, ವಾಸುದೇವಭಟ್ಟರು ತೆಪ್ಪಗೆ ಹೋಗಿಬಿಟ್ಟರು. ಆದರೆ ದಾದಾ ಸಿಟ್ಟಿಗೇಳುವುದನ್ನೇ ಕಂಡಿರದಿದ್ದ ನಾನು ಅವರ ಕೋಪವನ್ನು ನೋಡಿ ಬೆರಗಾದೆ.

ತುಸು ಸಮಯದ ನಂತರ ದಾದಾ ತಾವೇ ಹೇಳಿದರು: "ಪಾಟಣಕರ ಜ್ಯೋತಿಷಿ ಬುದ್ಧಿವಂತ ಮನುಷ್ಯ, ಆದರೆ ವ್ಯವಹಾರಜ್ಞಾನ ಮಾತ್ರ ತುಸು ಕಮ್ಮಿ. ತಮ್ಮ ಗಳಿಕೆಯಲ್ಲೇ ಹೇಗೆ ಸುಖವಾಗಿ ಇರಬೇಕೆಂದು ಅವರಿಗೆ ತಿಳಿಯದು. ಏನೇನೋ ಉದ್ಯೋಗ ಮಾಡಲು ಹೋಗಿ ಕೈ ಸುಟ್ಟುಕೊಂಡರು. ಮುಂಬಯಿಗೆ ಹೋದರೆ ಅವರ ಭಾಗ್ಯ ತೆರೆದೀತೆಂದು ಯೋಚಿಸಿ ಅವರಿಗೆ ಎರಡು ಸಾವಿರ ಕೊಟ್ಟು ಕಳಿಸಿದೆ. ಅಲ್ಲಿ ಅವರ ಭಾಗ್ಯ ಕುದುರಿದೆ. ಆದರೆ ಈ ವಿಷಯ ವಾಸುದೇವಭಟ್ಟರಿಗೆಂತು ಹೇಳುವುದು?"

ಧರ್ಮಶಾಸ್ತ್ರದಲ್ಲಿ ಗುಪ್ತದಾನದ ಮಹತ್ವದ ಬಗೆ ಬೇಕಾದಷ್ಟು ಹೇಳಿದೆ. ಆದರೆ ಅದನ್ನಿಲ್ಲಿ ನಾನು ಪ್ರತ್ಯಕ್ಷ ಕಂಡೆ.

■

ನಾನು ಆದೇ ಎಂ.ಬಿ.ಬಿ.ಎಸ್. ಮುಗಿಸಿ ಊರಿಗೆ ಬಂದಿದ್ದೆ. ಸಮವಯಸ್ಕರ ಮಧ್ಯೆ ಸಮಯ ಸವೆಯುತ್ತಿದ್ದಂತೆಯೆ ಜ್ಞಾನಿಗಳಾದ ಹಿರಿಯರ ಮಾತು, ಕೃತಿಗಳನ್ನು ಕೇಳಿ, ಕಂಡು ಮಹತ್ತರ ಜೀವನ ಪಾಠಗಳನ್ನು ಅರಗಿಸಿಕೊಳ್ಳಲು ಯತ್ನಿಸುತ್ತಿದ್ದ ವಯಸ್ಸು. ಒಂದು ರಾತ್ರಿ ನಾನು ದಾದಾರವರ ಬಳಿ ಕುಳಿತಿದ್ದಾಗ ಒಬ್ಬ ಮನುಷ್ಯ ಅವಸರದಿಂದ ಕಂಗಾಲಾಗಿ ಬಂದಿದ್ದ. ಹೊರಗೆ ಭಾರಿ ಮಳೆ ಸುರಿಯುತ್ತಿತ್ತು. ಆತ ನನ್ನನ್ನುದ್ದೇಶಿಸಿ, "ರಾಯರೆ, ನೀವು ಡಾಕ್ಟರ್ ಪರೀಕ್ಷೆ ಮುಗಿಸಿ ಬಂದಿದ್ದೀರೆಂದು ನಿಮ್ಮ ಕಡೆಗೆ ಬಂದೆ. ನನ್ನ ಮಗಳು ಚೊಚ್ಚಿಲು ಬಸಿರಿ. ಆದರೆ ನಿನ್ನೆಯಿಂದ ಹೊಟ್ಟೆಯಲ್ಲಿ ಕೂಸಿನ ಚಲನವಲನವೇ ಇಲ್ಲ. ಮನೆಯಲ್ಲಿ ಎಲ್ಲರಿಗೂ ಗಾಬರಿ. ನೀವು ಕೂಡಲೆ ನನ್ನ ಜೊತೆ ಬಂದು ಅವಳನ್ನು ನೋಡಿ ಕೂಸು ಜೀವಂತವಿದೆಯೋ ಇಲ್ಲವೋ ಹೇಳಿದರೆ ಉಪಕಾರವಾಗುವುದು," ಎಂದು ಅಂಗಲಾಚಿದ.

ಆ ಕಾಲದಲ್ಲಿ ಗೋವೆಯಲ್ಲಿ ಸರಿಯಾದ ರಸ್ತೆಗಳೂ ಇರಲಿಲ್ಲ. ಅದರಲ್ಲೂ ನಮ್ಮೂರು ಇದ್ದುದು ಕಾಡಿನಲ್ಲಿ. ನನ್ನನ್ನು ಕರೆಯಲು ಬಂದ ಈ ಗೃಹಸ್ಥನ ಊರಾದ ಸಂತೋಷೆಗೆ ಆ ಜಡಿಮಳೆಯಲ್ಲೇ ಕಾಡಿನಲ್ಲಿ ನಡೆದುಹೋಗಬೇಕು. ಅದನ್ನು ನೆನೆದೇ ನನ್ನ ಮೈ ಮೇಲೆ ಮುಳ್ಳು ಹರಿದಂತೆನಿಸಿ ದಾದಾರವರ ಕಡೆಗೆ ಹೊರಳಿ ಏನು ಮಾಡುವುದೆಂದು ವಿಚಾರಿಸಿದೆ.

"ಹಾಗೆ ನೋಡಿದರೆ ನೀನು ಹೋಗಬಾರದೆನಿಸುತ್ತದೆ. ನೀನು ಮೊದಲೇ ಅಶಕ್ತ; ಅದರಲ್ಲೂ

(ಮೂಲ ಮರಾಠಿ ಲೇಖನವನ್ನು ಕನ್ನಡಿಸುವಲ್ಲಿ ಶ್ರೀ ಗುರುನಾಥ ಜೋಶಿಯವರ ನೆರವಾಗಿದ್ದಾರೆ.)

ಇಷ್ಟು ವರ್ಷಗಳನ್ನು ಮುಂಬಯಿಯಲ್ಲಿ ಕಳೆದು ಬಂದ ನಿನಗೆ ಇಂಥ ಜೀವನದ ಅಭ್ಯಾಸವಿಲ್ಲ. ಈ ಮಳೆಯಲ್ಲಿ ನೀನು ನಡೆದುಕೊಂಡು ಹೋಗುವುದು ನಿನ್ನ ಆರೋಗ್ಯಕ್ಕೆ ಒಳ್ಳೆಯದಲ್ಲ. ಆದರೆ ನಿನ್ನ ಸ್ಥಳದಲ್ಲಿ ನಾನಿದ್ದರೆ ಮಾತ್ರ ಖಂಡಿತ ಬೇರೆ ವಿಚಾರವನ್ನೇ ಮಾಡದೆ ಹೋಗುತ್ತಿದ್ದೆ."

ಸರಿ, ನಾನು ತಕ್ಷಣ ಬಟ್ಟೆ ಬದಲಿಸಿ ಹೊರಟು ನಿಂತೆ. "ಸರಿ, ನೀನು ಸಂಬಾಳಿಸಿಕೊಂಡು ಹೋಗು. ನನ್ನ ರೇನ್‌ಕೋಟ್ ಒಯ್ಯಿ," ಎಂದರು ದಾದಾ.

ರೋಗಿಗಳ ಶುಶ್ರೂಷೆಯನ್ನೇ ಒಂದು ವ್ರತವಾಗಿ ಸ್ವೀಕರಿಸಲಿದ್ದ ನನಗೆ ಇದೊಂದು ಮಹತ್ತರ ಪಾಠವಾಯಿತು.

•

ವೈದ್ಯ ಮನೆತನದಲ್ಲಿಯ ಒಂದು ಸಂಪ್ರದಾಯ ಆದರ್ಶವೆಂದು ಇಂದಿಗೂ ನಾನು ಭಾವಿಸಿದ್ದೇನೆ. ಎಲ್ಲರ ಮೇಲೂ ಮನೆತನದ ಹಿರಿಯರ ವರ್ಚಸ್ಸು ಖಂಡಿತ ಇರುವುದಾದರೂ ಯಾರೂ ತಮ್ಮ ವಿಚಾರವನ್ನು ಇನ್ನೊಬ್ಬರ ಮೇಲೆ ಹೇರುವುದಿಲ್ಲ. ಪ್ರತಿಯೊಬ್ಬರೂ ತಂತಮ್ಮ ವ್ಯಕ್ತಿಸ್ವಾತಂತ್ರ್ಯವನ್ನು ಪಯೋಗಿಸಿಕೊಂಡು ತಮ್ಮ ನಿರ್ಣಯಗಳನ್ನು ತಾವೇ ಕೈಕೊಳ್ಳಬೇಕು. ಕೇಳಿದಾಗ ಹಿರಿಯರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವರಾದರೂ ಅವುಗಳನ್ನು ಇತರರು ಒಪ್ಪಲೇಬೇಕೆಂದೇನೂ ಇಲ್ಲ. ಒಪ್ಪಿದರೆ ಸಂತೋಷ, ಒಪ್ಪದಿದ್ದರೆ ಆ ಬಗ್ಗೆ ಏನೂ ಅತೃಪ್ತಿಯಿಲ್ಲ.

ನಾನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉಚ್ಚಸ್ಥಾನ ಗಳಿಸಿದ್ದೆನಾದರೂ ನಾನೇನೂ ಮಹಾ ಪ್ರತಿಭಾವಂತನೆಂಬ ಭ್ರಮೆ ನನಗಿರಲಿಲ್ಲ. ಮುಂದೇನು ಎಂಬ ಪ್ರಶ್ನೆ ನನಗೆದುರಾದಾಗ ಅನೇಕರು ಅನೇಕ ಸೂಚನೆಗಳನ್ನು ಮುಂದಿಟ್ಟರಾದರೂ ಕೊನೆಯ ನಿರ್ಣಯವನ್ನು ನನಗೇ ಬಿಟ್ಟರು. ಆದರೆ ಹಿರಿಯರೇ ನಿರ್ಣಯಿಸಬೇಕೆಂದು ಅದಕ್ಕಾಗಿ ಕಾಯುತ್ತ ಆ ದಿನ ನಾನು ದಾದಾರವರ ಬಳಿ ನಿಂತಿದ್ದೆ.

ಕೊನೆಗೆ ಅವರು ದೀರ್ಘ ವಿಚಾರದ ನಂತರ ಹೇಳಿದರು: "ನನ್ನ ಅಭಿಪ್ರಾಯದಲ್ಲಿ ನಿನಗೆ ಹಣ, ಕೀರ್ತಿ, ಶಿಕ್ಷಣ – ಯಾವುದೂ ಮುಖ್ಯವಲ್ಲ.



ಪ್ರಾಣಾಚಾರ್ಯ ದಾದಾ ವೈದ್ಯರು

ನೀನು ತುಂಬ ಅಶಕ್ತನಾಗಿದ್ದೀ. ನಿನ್ನ ಪ್ರಕೃತಿಯನ್ನು ಸುಧಾರಿಸಿಕೊಳ್ಳುವುದಲ್ಲದೆ ಅದನ್ನು ಕಾಯ್ದುಕೊಳ್ಳುವುದಕ್ಕೆ ಅಗತ್ಯವಾದಂಥ ಮಾರ್ಗವನ್ನು ನೀನು ಕಂಡುಕೊಳ್ಳಬೇಕು. ವೈದ್ಯಕೀಯ ಅಭ್ಯಾಸದಿಂದ ನೀನು ಇದನ್ನು ಸಾಧಿಸಬಲ್ಲೆಯೆಂದು ನನ್ನ ಭಾವನೆ. ಔಷಧಿ ಮತ್ತು ಆರೋಗ್ಯಶಾಸ್ತ್ರದ ಅಭ್ಯಾಸದಿಂದ ನನ್ನ ಮಾತಿನ ಮರ್ಮ ನಿನಗಾದೀತು."

ಅವರ ಮಾತು ನನ್ನ ಅಂತರಂಗದ ಬಾಗಿಲನ್ನು ತೆರೆಸಿ ನನ್ನ ವೈಯಕ್ತಿಕ ದೃಷ್ಟಿಯಿಂದ, ಮನೆತನದ ದೃಷ್ಟಿಯಿಂದ, ವೈದ್ಯಕೀಯ ಶಿಕ್ಷಣದಿಂದ ನಾನು ಮುಂದೆ ನನ್ನ ಜೀವನದಲ್ಲಿ ಮಾಡಬಹುದಾದ ಕಾರ್ಯದ ದೃಷ್ಟಿಯಿಂದ ಸುತ್ತ ಕಡೆಯಿಂದ ವಿಚಾರ ಮಾಡಲು ನನಗೆ ಪ್ರೇರಣೆ ನೀಡಿತು. ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಆಗ ಪ್ರಾರಂಭವಾಗಿದ್ದ ಆಯುರಾಂಗ್ಲ ಪದ್ಧತಿಯ

ವೈದ್ಯಕೀಯ ಶಿಕ್ಷಣ ನನಗೆ ಆದರ್ಶಪ್ರಾಯ ವೆನಿಸಿತು. ಅಲ್ಲಿಯ ಶಿಕ್ಷಣ ಕ್ರಮದಲ್ಲಿ ಸಂಸ್ಕೃತ, ಆಯುರ್ವೇದ ಮತ್ತು ಆಧುನಿಕ ಅಲೋಪಥಿ ಈ ಮೂರನ್ನು ಅಳವಡಿಸಲಾಗಿತ್ತು. ಆ ಮೂರರಲ್ಲೂ ನನಗೆ ಪರಿಣತಿ ಅಗತ್ಯವೆನಿಸಿ ನಾನು ಅದನ್ನೇ ಆಯ್ದುಕೊಂಡೆ. ದಾದಾ ಮತ್ತು ಇತರ ಹಿರಿಯರಿಗೆಲ್ಲ ನನ್ನ ಈ ವಿಚಾರ ಹಿಡಿಸಿತು. ಕ್ಷಿಪ್ರದಲ್ಲೇ ನಾನು ಬನಾರಸಕ್ಕೆ ಹೋಗಿಯೂಬಿಟ್ಟೆ.

*

ಏನು ಕಾರಣವೋ ದೇಸಾಯಿ ಮನೆತನಕ್ಕೂ ವೈದ್ಯ ಮನೆತನಕ್ಕೂ ವೈಮನಸ್ಯವಿತ್ತು. ಅದನ್ನು ತಿಳಿಗೊಳಿಸಲು ದಾದಾ ಅನೇಕ ವರ್ಷಗಳಿಂದ ಮಾಡುತ್ತ ಬಂದ ಪ್ರಯತ್ನ ನಿಷ್ಫಲವಾಗಿತ್ತು. ಆದರೆ ದೇಸಾಯರ ಮಗ ಡಾ. ಬಾಬೂರಾಯರು ಕೇಶವ ವೈದ್ಯರ ಮಗಳನ್ನು ವಿವಾಹವಾಗಲು ಒಪ್ಪಿದ್ದರಿಂದ ಈ ವಿರಸ ಕೊನೆಗೊಂಡು ದಾದಾ ಅವರ ಆಸೆ ಕೈಗೂಡುವ ಸಂದರ್ಭವೊದಗಿತು. ಆದರೆ ವಿವಾಹ ಸನ್ನಿಹಿತವಾದಾಗಲೇ ಅದುವರೆಗೆ ಉತ್ತಮ ಆರೋಗ್ಯವನ್ನು ಕಾಯ್ದುಕೊಂಡಿದ್ದ ದಾದಾರವರಿಗೆ ಒಂದು ದಿನ ೧೦೨ ಡಿಗ್ರಿ ಜ್ವರ ಬಂದು ಮುಂದೆ ೧೦೪ಕ್ಕೂ ಏರಿತು. ಆಗ ಅವರಿಗೆ ೮೫ ವರ್ಷ ವಯಸ್ಸು.

ದಾದಾರವರ ಈ ಅಸ್ವಾಸ್ಥ್ಯ ಎಲ್ಲರ ಆತಂಕಕ್ಕೂ ಕಾರಣವಾಯಿತು. ವಿವಾಹಕ್ಕೆ ಮುನ್ನ ಮನೆತನದಲ್ಲಿ ಯಾರಾದರೂ ತೀರಿಕೊಂಡರೆ ಅಶುಭವೆಂದು ವಿವಾಹ ಮುರಿದುಬೀಳುವ ಭಯವೂ ಇತ್ತು. ಆದರೆ ಯಾರೂ ಬಹಿರಂಗದಲ್ಲಿ ಆಡಿ ತೋರಿಸುವಂತಿರಲಿಲ್ಲ.

ಒಂದು ದಿನ ದಾದಾ ಶಾಸ್ತ್ರಿಗಳನ್ನೂ ಪುರೋಹಿತರನ್ನೂ ಕರೆಸಿ ತಾವು ಕೂಡಲೇ ಸಂನ್ಯಾಸ ತೆಗೆದುಕೊಳ್ಳುವ ವಿಚಾರವನ್ನು ವ್ಯಕ್ತಪಡಿಸಿದರು. ಪಂಡಿತರು 'ಧರ್ಮಸಿಂಧು' ಮಂಥನ ಮಾಡಿ ಶಾರೀರಿಕ ಅಸ್ವಾಸ್ಥ್ಯದಂಥ ಈ ಸಮಯದಲ್ಲಿ ಸಂನ್ಯಾಸಗ್ರಹಣ ಬರುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಸಂನ್ಯಾಸ ಸ್ವೀಕಾರಕ್ಕೆ ಪಾಲಿಸಬೇಕಾದ ನೇಮ ನಿಷ್ಠೆಗಳು ಬಹಳವಾಗಿರುವಾಗ ಅವರ ಅನುಷ್ಠಾನ ಅಸಾಧ್ಯವೆಂದು ಅವರು ಖಂಡಿತವಾಗಿಯೇ ನುಡಿದರು.

ಮೈಯಲ್ಲಿ ವಿಪರೀತ ಜ್ವರದಿಂದ ಬಳಲುತ್ತಿದ್ದ ದಾದಾ ರೇಗಿದಂತಾಗಿ ತಟ್ಟನೆ, "ನನಗೆ ಹಾಗೆ ಹೇಳಬೇಡಿರಿ," ಎನ್ನುತ್ತ 'ಧರ್ಮಸಿಂಧು'ವಿನ ಇಷ್ಟನೇ ಪುಟದ ಮೇಲೆ ಆರ್ತ ಸಂನ್ಯಾಸದ ಬಗ್ಗೆ ಹೇಳಿದ್ದು ಅದನ್ನು ನೋಡಬೇಕೆಂದು ಕೇಳಿಕೊಂಡರು.

ಶಾಸ್ತ್ರಜ್ಞರು ಬೆಚ್ಚಿದರು, ಆ ಪುಟ ತೆಗೆದು ನೋಡಿದಾಗ ಅವರು ದಾದರವರ ಮಾತನ್ನು ಮನ್ನಿಸಲೇಬೇಕಾಯಿತು. ಸಂನ್ಯಾಸ ದೀಕ್ಷೆಗಾಗಿ ಎಲ್ಲ ಕರ್ಮಗಳನ್ನೂ ಬೇಗ ಮಾಡಬಹುದೇ ಎಂಬುದನ್ನು ನಿರ್ಧರಿಸುವುದಕ್ಕಾಗಿ ದಾದಾ ನನ್ನೆಡೆ ನೋಡಿದರು. ಅವರ ವಯಸ್ಸು, ಅದರಲ್ಲೂ ೧೦೪ ಡಿಗ್ರಿ ಜ್ವರ. ಇಂಥದರಲ್ಲಿ ಸ್ನಾನ, ಹೋಮ ಹವನಾದಿಗಳ ಶ್ರಮವನ್ನು ಅವರು ತಾಳಬಹುದೆ? ಆದರೆ ನನಗೇನು ಅನಿಸಿತೊ – ತಟ್ಟನೆ ಅಡ್ಡಿಯಿಲ್ಲವೆಂದು ಹೇಳಿಬಿಟ್ಟೆ.

ಆ ಜ್ವರದಲ್ಲೇ ಸರ್ವ ಕ್ರಿಯಾಕರ್ಮಗಳೂ ಸಾಂಗವಾಗಿ ಮುಗಿದವು. ಆದರೆ ಮರುದಿನ ಜ್ವರ ಮತ್ತೂ ಏರಿತು. ಅವರಿಗೆ ನ್ಯುಮೋನಿಯಾ ಆಗಿತ್ತು. ನ್ಯುಮೋನಿಯಾ ಆಗ ಜಗತ್ತಿನ ಅತಿ ಭಯಂಕರ ರೋಗಗಳಲ್ಲಿ ಒಂದೆಂದು ಪರಿಗಣಿತವಾಗುತ್ತಿತ್ತು.

ದಾದಾರವರಿಗೂ ಈ ಸಂಶಯ ಬಂದಿತ್ತು. ಅವರೇ ಹೇಳಿದರು, "ಪ್ರಾಣಾಯಾಮದಿಂದ ಎಲ್ಲ ರೋಗಗಳೂ ಓಡಿಹೋಗುತ್ತವೆಂಬ ಸಿದ್ಧಾಂತ ಮಾಡಿ ನಾನೇ ಇತ್ತೀಚೆ ಒಂದು ಲೇಖನ ಬರೆದೆ. ಆದರೆ ನನ್ನ ಈ ಜಡ್ಡಿನಿಂದ ಈ ಸಿದ್ಧಾಂತ ಟೊಳ್ಳು ಎಂದಾಯಿತಲ್ಲ! ನನಗೇ ಪುಪ್ಪುಸದ ಜಡ್ಡು ಆಗಬೇಕೆಂದರೆ ದುರ್ದೈವವಲ್ಲವೆ?" ಎಂದು.

ಆದರೆ ಸಂನ್ಯಾಸ ಸ್ವೀಕಾರದಿಂದ ಅವರಿಗೆ ಅತೀವ ಆನಂದವೇ ಆಗಿತ್ತು. ಸಂನ್ಯಾಸದೊಂದಿಗೇ ವ್ಯಕ್ತಿಯು ತಾನು ಜನಿಸಿದ ಮನೆತನದೊಂದಿಗಿನ ಸಂಬಂಧವನ್ನು ಕಡಿದುಕೊಂಡು ಬಿಡುತ್ತಾನೆ. ಆದ್ದರಿಂದ ಅವನು ಸತ್ತರೂ ಸೂತಕಾದಿಗಳು ಯಾವವೂ ಆ ಮನೆತನದವರನ್ನು ತಟ್ಟುವುದಿಲ್ಲ; ಯಾವ ಕಾರ್ಯಕ್ಕೂ ಅಡ್ಡಿಯಾಗುವುದಿಲ್ಲ. ಅಂದಾಗ ಅವರು ಉದ್ದೇಶಿಸಿದ್ದ ಮದುವೆಗೆ.

ಯಾವುದೇ ಆತಂಕ ಈಗ ಅಸಾಧ್ಯವಿತ್ತು.

•

ದಾದಾ ಅವರ ಜ್ವರವಿಳಿದ ನಂತರ ಅವರನ್ನು ಪಣಜಿಯಲ್ಲಿ ಡಾ. ಗೋವಿಂದರಾಯರಿಗೆ ತೋರಿಸಲೆಂದು ಕರೆದುಕೊಂಡು ಹೋಗಲಾಯಿತು. ಒಂದು ದಿನ ಊಟವಾದ ಬಳಿಕ ಗೋವಿಂದರಾಯರು ಹಾಸ್ಯರಸ ಪ್ರಧಾನವಾದ ನಾಟಕವೊಂದನ್ನು ದಾದಾರವರ ಮನೋರಂಜನಕ್ಕೆಂದೇ ಓದಿ ತೋರಿಸಿದರು. ನಮ್ಮೆಲ್ಲರಂತೆ ದಾದಾ ಕೂಡ ಆ ಆನಂದದಲ್ಲಿ ಪಾಲುಗೊಂಡಂತೆ ತೋರಿತು.

ಒಂದು ಒಂದೂವರೆ ತಾಸು ಈ ಕಾರ್ಯಕ್ರಮ ನಡೆದು ಕೊನೆಗೊಂಡ ನಂತರ ಉಳಿದವರೆಲ್ಲ ಎದ್ದು ಹೋದರು. ಆಗ ದಾದಾ ನನ್ನನ್ನು ಹತ್ತಿರ ಕರೆದು ಮೆಲ್ಲಗೆ ನುಡಿದರು: "ಗೋವಿಂದನೇನೊ ಒಳ್ಳೆಯ ಹೇತುವಿನಿಂದ ಇದನ್ನು ಓದಿ ತೋರಿಸಿದ. ಅವನ ಮನಸ್ಸಿಗೆ ನೋವಾಗಬಾರದೆಂದು ನಾನೂ ನಿಮ್ಮೆಲ್ಲರೊಡನೆ ನಗುವಿನಲ್ಲಿ ಪಾಲುಗೊಂಡೆ. ಹಾಗೆ ನೋಡಿದರೆ ಅದರಲ್ಲೇನು ಅರ್ಥವಿತ್ತು? ಇಷ್ಟೊಂದು ಪ್ರತಿಭಾವಂತ ಲೇಖಕ ತನ್ನ ಲೇಖನಿಯನ್ನು ಲೋಕಪ್ರಬೋಧನಕ್ಕಾಗಿ ಬಳಸಬಹುದಿತ್ತಲ್ಲ ಎಂದು ವ್ಯಸನವಾಗುತ್ತದೆ."

ದಾದಾ ತಮ್ಮ ಕಾಲದಲ್ಲಿ ಲೇಖನ, ಕಾವ್ಯ, ನಾಟಕ, ವೈದ್ಯಕೀಯ ಈ ನಾಲ್ಕು ಕ್ಷೇತ್ರಗಳಲ್ಲಿ ಪರಿಶ್ರಮಿಸಿದ ಮಹಾನುಭಾವಿ. ಅವರು ಯಾರ ಬಗ್ಗೆಯೂ ಸುಮ್ಮನೆ ಲಘುವಾಗಿ ಮಾತಾಡುವವರಾಗಿರಲಿಲ್ಲ.



**ಕೇರಿಯಲ್ಲಿ ಅಭಿಮಾನಿಗಳು ನಿಲ್ಲಿಸಿದ ದಾದಾರವರ ವಿಗ್ರಹ**

•

ಸತ್ಪುರುಷರ **ಮೇಲೆ** ದಾದಾ ಅವರಿಗೆ ಆಳವಾದ ವಿಶ್ವಾಸ. ಆದರೆ ಅಂಧ ವಿಶ್ವಾಸ ಅವರ ಸಮೀಪ ಕೂಡ ಸುಳಿಯುತ್ತಿರಲಿಲ್ಲ. ಅವರ ತಂದೆಗೆ ಸಾಧು ಸಂತರ ಮೇಲೆ ಎಲ್ಲಿಲ್ಲದ ಭಕ್ತಿ–ವಿಶ್ವಾಸ. ದಾದಾ ಆ ಬಗ್ಗೆ ಎಷ್ಟು ವಾದಿಸಿದರೂ ಹಿರಿಯರು ಮಣಿಯಲಿಲ್ಲ.

ಹೀಗಿರುತ್ತ ಒಂದು ದಿನ ಕೇರಿಯಲ್ಲಿ ಇವರ ಮನೆಗೊಬ್ಬ 'ಸಾಧು' ಬಂದ. ಅವರು ಏನು ಮಾಡುವರೆಂಬ ಕುತೂಹಲದಿಂದ ದಾದಾ ಕವಿಯೆಲ್ಲ ಕಣ್ಣಾಗಿದ್ದಾಗ ಈ ಸಾಧು ಮಹಾರಾಜರು ಇವರ ತಂದೆಯವರನ್ನು ಅಂಗಳದಲ್ಲಿ ಒಂದೆಡೆ ಕರೆದುಕೊಂಡು ಹೋಗಿ ಅಲ್ಲಿ ಹತ್ತು ಅಡಿ ಆಳದಲ್ಲಿ ಒಂದು ದಿವ್ಯ ವಿಗ್ರಹವಿದೆ. ಅದನ್ನು ಹೊರಕ್ಕೆ ತೆಗೆಸಿದರೆ ಕಲ್ಯಾಣವಾಗುವುದೆಂದು ಹೇಳಿದನು. ಆ ಮಾತನ್ನು ತಂದೆಯವರು

'ಗೋಮಂತಕದ ಧನ್ವಂತರಿ'ಯೆಂದೇ ಖ್ಯಾತರಾಗಿದ್ದ ರಾಮಚಂದ್ರ ಪಾಂಡುರಂಗ ವೈದ್ಯರದು ಬಹುಮುಖಿ ವ್ಯಕ್ತಿತ್ವ. ಅವರು ಮನೆತನದ ವೈದ್ಯ-ಪರಂಪರೆಯಲ್ಲೇ ಬೆಳೆದುಬಂದು ವೈದ್ಯರಾದವರು. ಅವರು ಮರಾಠಿಯಲ್ಲಿ ಸಮರ್ಥ ಶೈಲಿಯನ್ನು ಬೆಳೆಸಿಕೊಂಡು ಉತ್ತಮ ಗದ್ಯ ಲೇಖಕರೂ ಕವಿಯೂ ಎನಿಸಿದರು. 'ಪಥ್ಯಬೋಧ,' 'ಪ್ರಾಚೀಪ್ರಭಾ' 'ಹಳದ-ಕುಂಕು' ಗಳಂತಹ ಪತ್ರಿಕೆಗಳನ್ನು ಅವರು ನಡೆಸಿದರು.

ಸಪ್ಟಂಬರ್ ೯, ೧೮೯೯ರಲ್ಲಿ ಗೋವೆಯ ಫೊಂಡೆ ಮಹಲಿನಲ್ಲಿಯ ಕೇರಿ ಎಂಬ ಹಳ್ಳಿಯಲ್ಲಿ ರಾಮಚಂದ್ರ ಜನಿಸಿದರು. ಮೂಲತಃ ಹಳೆ ಗೋವೆಯ ಬಳಿಯ ಪಾಸವೇಲದ್ದಾದ ಈ ಮನೆತನ ಪೋರ್ತುಗೀಜರು ಒತ್ತಾಯದ ಮತಾಂತರ ಪ್ರಾರಂಭಿಸಿದ ನಂತರ ಕೇರಿಗೆ ಬಂದು ನೆಲೆಸಿತ್ತು. ಈ ಮನೆತನದ ಮೂಲ ಅಡ್ಡ ಹೆಸರು 'ಅಯಂಗಳ' ಎಂದಿದ್ದುದು ಮುಂದೆ ಈ ಕುಟುಂಬದಲ್ಲಿ ಆಗಿ ಹೋದ ಪ್ರಸಿದ್ಧ ವೈದ್ಯರಿಂದಾಗಿ 'ವೈದ್ಯ' ಎಂದಾಯಿತು.

ರಾಮಚಂದ್ರನನ್ನು ಮನೆಯಲ್ಲೆಲ್ಲರೂ ದಾದಾ ಎಂದು ಕರೆಯುವುದು ವಾಡಿಕೆ. ಮುಂದೆ ಆ ನಾಡಿಗೆಲ್ಲ ಇವರು 'ದಾದಾಸಾಹೇಬ'ರಾಗಿಬಿಟ್ಟರು. ಗೋವೆಯ ಸಾರ್ವಜನಿಕ ಜೀವನದಲ್ಲಿ ಒತ್ತಾಯದ ಮತಾಂತರದಿಂದ ಕ್ರೈಸ್ತರಾದವರನ್ನು ಶುದ್ಧೀಕರಿಸಿ ಪುನಃ ಹಿಂದೂ ಧರ್ಮದಲ್ಲಿ ಸೇರಿಸಿಕೊಳ್ಳುವ ಆಂದೋಲನದಲ್ಲಿ ದಾದಾ ನೇತೃತ್ವ ವಹಿಸಿ ಸೆರೆಮನೆಗೂ ಹೋಗಿ ಬರಬೇಕಾಯಿತು. ಗೋವೆಯಲ್ಲಿ ಕೆಲ ಉದ್ದಿಮೆಗಳನ್ನು ಪ್ರಾರಂಭಿಸಲೆತ್ನಿಸಿ ಅವರು ಕೈ ಸುಟ್ಟುಕೊಂಡರು. ಪಣಜಿಯಲ್ಲಿ ಹಿಂದೂ ಫಾರ್ಮಸಿಯನ್ನು ಪ್ರಾರಂಭಿಸಿದರು. ಗೋವಾ ವಿದ್ಯಾಪ್ರಸಾರಕ ಮಂಡಳ ಸ್ಥಾಪಿಸಿ ಆ ಮೂಲಕ ಪ್ರಾರಂಭಿಸಿದ ಅಲ್ಮೇಡಾ ಕಾಲೇಜು ಇಂದು ಪ್ರಸಿದ್ಧ ಶಿಕ್ಷಣ ಸಂಸ್ಥೆ.

ಅವರು ಮಾರ್ಚ್ ೬. ೧೯೪೭ ರಂದು ಪಣಜಿಯಲ್ಲಿ ಬ್ರಹ್ಮೀಭೂತರಾದರೂ ಅವರನ್ನು ಅವರ ಊರಾದ ಕೇರಿಗೆ ತಂದೇ ಸಮಾಧಿ ಮಾಡಲಾಯಿತು.

ನುಡಿದರು. ಕೂಡಲೆ ಆಗೆತ ಪ್ರಾರಂಭವಾಯಿತು.

ಆಗೆತ ಹತ್ತಡಿಯ ವರೆಗೆ ಬಂದರೂ ವಿಗ್ರಹದ ಸುಳಿವೇ ಇಲ್ಲ. ರಾತ್ರಿಯಾದ್ದರಿಂದ ಮರುದಿನ ಪುನಃ ಅಗೆಯಬಹುದೆಂದು ಸೂಚನೆ ಬಂದದ್ದರಿಂದ ಅಲ್ಲಿಗೆ ಕೆಲಸ ನಿಂತು ಎಲ್ಲರೂ ನಿದ್ರೆ ಹೋದರು. ದಾದಾ ಮೈಯೆಲ್ಲ ಕಣ್ಣಾಗಿ ಕಾಯುತ್ತಿದ್ದರು. ಮಧ್ಯರಾತ್ರಿಯ ನಂತರ ಸಾಧುವಿನ ಹಾಸಿಗೆಯಲ್ಲಿ ಚಟುವಟಿಕೆ ಕಾಣಿಸಿತು. ಆತ ಎದ್ದು ಒಂದೊಂದೇ ಬಾಗಿಲು ದಾಟಿ ಹೊರಕ್ಕೆ ನಡೆದ. ಅವನಿಗೆ ಸಂಶಯ ಬರಬಾರದೆಂದು ದಾದಾ ಶಾಲು ಹೊದ್ದುಕೊಂಡು ಅವನ ಹಿಂದೆಯೆ ಕಳ್ಳ ಹೆಜ್ಜೆಯಿಂದ ನಡೆದರು. ದೊಡ್ಡ ವಾಡೆಯಲ್ಲಿಯ ಹಲವು ಬಾಗಿಲುಗಳನ್ನು ದಾಟಿ ಆತ ಆ ತಗ್ಗಿನ ಬಳಿ ಬಂದು ಕೆಳಕ್ಕಿಳಿದು ಕೈಲಿದ್ದುದೇನನ್ನೋ ಅದರಲ್ಲಿಟ್ಟ. ದಾದಾ ಕೂಡಲೇ ತಮ್ಮ ಹಾಸಿಗೆಗೆ ಹೋಗಿ ಮಲಗಿದರು. ತುಸು ಹೊತ್ತಿನಲ್ಲೇ ಸಾಧುವೂ ಮರಳಿ ಬಂದು ಮಲಗಿದನು.

ಮರುದಿನ ಬೆಳಿಗ್ಗೆಯೇ ದಾದಾ ತಮ್ಮ ಹಿರಿಯರಿಗೆ ರಾತ್ರಿ ಕಂಡುದನ್ನೆಲ್ಲ ಸವಿಸ್ತರವಾಗಿ ವಿವರಿಸಿ ಭಂಡ ಸಾಧುವನ್ನು ಬಯಲಿಗೆಳೆದರು. ಸಾಧುವಿಗೆ ಆ ಕ್ಷಣವೇ ಕಾಲಿಗೆ ಬುದ್ಧಿ ಹೇಳದೆ ಗತ್ಯಂತರವುಳಿಯಲಿಲ್ಲ. ಹಿರಿಯರಿಗೆ ಒಂದಾದರೂ ದೃಷ್ಟಾಂತವನ್ನು ತೋರಿಸಿಕೊಟ್ಟೆನಲ್ಲವೆಂಬುದೇ ಅವರಿಗೆ ಸಮಾಧಾನ. ★

# ಜೀವ-ದೇವ

ಹತ್ತು ಜನ್ಮ ಕಳೆದಾಗ ಪ್ರಥಮ ಜಿನ
ಮುಕ್ತನಾದನಣ್ಣ,
ಮೂವತ್ತಾರು ಕಳೆದಾಗ ವೀರಜಿನ
ಕಂಡನದರ ಬಣ್ಣ.

ಅಭ್ಯುದಯ ಕಡೆಗಣಿಸಿ ಲೋಕದಲಿ
ಬದುಕು ನರಕ ಸಮವು
ಮುಕ್ತ ಜೀವನವೇ ಶಕ್ತ ಭಾವ
ದಿನರಾತ್ರಿ ಉರುಳು ಭ್ರಮವು.

ಭಾರತಿಯ ದೀಪ 'ಮಿಹಿರ ದ್ವೀಪ'
ತಮವೆಲ್ಲ ಉಂಟೆ ಉಂಟು;
ಚಕ್ರನೇಮಿಕ್ರಮವಹುದು ಕಾಲಿಕವು
ಸಮರ ಬಿಡದ ನಂಟು.

ಭೌಮತ್ವ-ದೈವ ಓ ಜೀವ-ದೇವ
ಬೇಕೇಕೆ ಬೇರೆ ನಂಟು?

— ಅಂಬಿಕಾತನಯದತ್ತ

(ಇದು ರಜತೋತ್ಸವ ಸಂಚಿಕೆಗಾಗಿ ಆಮಂತ್ರಿತ ಕವನ)

ಕೆಲ ವರ್ಷಗಳ ಹಿಂದೆ ಬೆಂಗಳೂರಿನ ಕೆಲ ಬಡಾವಣೆಗಳಲ್ಲಿ ಕಾಲರಾ ಹಾವಳಿಯ ಕಾರಣ ಇನಾಕ್ಯುಲೇಶನ್ನಿಗೆ ಜನ ಸಾಲೋಸಾಲು ನಿಂತಿರುವುದನ್ನು ನೋಡುತ್ತಿದ್ದೆ. ಆದರೆ ಕೆಲಸದ ಒತ್ತಡದಿಂದಾಗಿ ನನಗೆ ಮಾತ್ರ ಇನಾಕ್ಯುಲೇಶನ್ ಹಾಕಿಸಿಕೊಳ್ಳಲಾಗಿರಲಿಲ್ಲ.

ಅಂದು ಮಧ್ಯಾಹ್ನದ ಊಟದ ವೇಳೆ ನಮ್ಮ ಬ್ಯಾಂಕಿನ 'ದಫ್ತರಿ' ಮಣಿ ಬಂದವರೆ ಇನಾಕ್ಯುಲೇಶನ್ ಹಾಕಿಸಿಕೊಳ್ಳದವರೆಲ್ಲ ತನ್ನೊಂದಿಗೆ ಬಂದರೆ (ಎದುರಿನ ಕಾರ್ಪೊರೇಶನ್ ಆಫೀಸಿನ ಆವರಣದಲ್ಲೇ ಅದರ ವ್ಯವಸ್ಥೆ ಇತ್ತು) ಹಾಕಿಸುವುದಾಗಿ ಹೇಳಿದರು. ಹೊಟ್ಟೆ ಕೆರೆಯುವ ಹೊತ್ತಿನಲ್ಲಿ ಅಲ್ಲಿ ಆ ಕ್ಯೂನಲ್ಲಿ ಮುಖಮೊಣಗಿಸಿಕೊಂಡು ನಿಲ್ಲುವುದು ಹೇಗೆಂದು ಯೋಚಿಸುತ್ತಲೆ ನಾವು ಕೆಲ ಜನ ಅಲ್ಲಿ ಹೋದೆವು. ಮಣಿಯ ಖಾಕಿ ಬಟ್ಟೆ ಕಂಡ ಕ್ಯೂ ಮಂದಿ, "ಏನ್ರಿ ಕಾಂಪೌಂಡ್ರೆ, ಡಾಕ್ಟ್ರು ಯಾವಾಗ್ಬರ್ತಾರೆ? ಬೇಗ ಇನಾಕ್ಯುಲೇಶನ್ ಹಾಕೋಕ್ಹೇಳಿ," ಅಂದಾಗ ಮಣಿ, "ಹಾಂ-ಹಾಂ, ಬರ್ತಾರೆ. ನೀವೆಲ್ಲ ಸರಿಯಾಗಿ ಕ್ಯೂ ನಿಲ್ಲಿ," ಎಂದವರಿಗೆ ಜಬರದಸ್ತಿನಿಂದ ಹೇಳಿ ನಮಗೆ, "ನಿಮಗಾಗ್ಲೇನೇ ಹೇಳ್ಳಿಲ್ವೆ ಒಳಗ್ಹೋಗಿ ಅಂತಾ..." ಎಂದು ನಮ್ಮನ್ನು ಒಳಕರೆದೊಯ್ದು-ಡಾಕ್ಟರರಿಗೆ, "ನಾವು ಬ್ಯಾಂಕಿನ ಜನ-ಅವಸರದಲ್ಲಿದೀವಿ" ಎಂದು ಹೇಳಿದವರೇ ನಮಗೆಲ್ಲ ಇನಾಕ್ಯುಲೇಶನ್ ಹಾಕಿಸಿ ಕರೆತಂದರು. ಮಣಿಯ 'ಖಾಕಿ ಪ್ರಜ್ಞೆ'ಗೆ ನಾವೆಲ್ಲ ಭಲೆ ಅನ್ನುತ್ತ ನಮ್ಮ ಡಬ್ಬಿಗಳನ್ನು ಖಾಲಿಮಾಡಲು ಹೆಜ್ಜೆ ಹಾಕಿದೆವು.

–ಇಂದ್ರಾಣಿ ಪ್ರೇಂದಿನಕರ

ಶಿವಮೊಗ್ಗದ ಜೇಸಿ ಸಂಸ್ಥೆ ಮತ್ತು ಚಿನ್ಮಯ ಮಿಷನ್ ಏರ್ಪಡಿಸಿದ್ದ ಧಾರ್ಮಿಕ ಶಿಬಿರದಲ್ಲಿ ನಡೆದ ಘಟನೆ. ಬ್ರಹ್ಮಚಾರಿ ಶ್ರೀ ಬ್ರಹ್ಮಚೈತನ್ಯ ಸ್ವಾಮೀಜಿಯವರು ಶಿಬಿರದುದ್ದಕ್ಕೂ ನಮ್ಮ ಜೊತೆಯೇ ಇದ್ದು, ಲೌಕಿಕ ಧಾರ್ಮಿಕ ಸಮನ್ವಯದ ಕುರಿತು ಮಾರ್ಗದರ್ಶನ ನೀಡುತ್ತಿದ್ದರು. ಪ್ರತಿ ಕೆಲಸವನ್ನು ಅಥವಾ ಪ್ರತಿ ಕಾರ್ಯಕ್ರಮವನ್ನು ಪ್ರಾರಂಭಿಸುವಾಗಲೂ ಮುಗಿಸುವಾಗಲೂ, "ಹರಿಃ ಓಂ" ಎಂದು ಹೇಳುವುದು ಅವರ ಪದ್ಧತಿ. ಆ ಒಳ್ಳೆಯ ಅಭ್ಯಾಸ ಅವರ ಸಹವಾಸದಿಂದ ನಮಗೂ ಮೈಗೂಡಿತ್ತು. ಶಿಬಿರವು ಮುಕ್ತಾಯಗೊಳ್ಳುವ ದಿನ ಎಲ್ಲರೂ ಊಟಕ್ಕೆ ಕುಳಿತಿರುವ ಸಮಯ. ಶಿಬಿರಾರ್ಥಿಗಳೆಲ್ಲಾ ೧೬ ರಿಂದ ೨೫ ರ ಯುವಕರು. ಹೊರಗಿನ ಆಕರ್ಷಣೆ ಸಹಜ ತಾನೆ? ಮೊದಲು ಮನೆಗೆ ಹೋಗಿ ನಂತರ ಹೊರಗೆ ಸುತ್ತಾಡುವ ಬಯಕೆಯಿಂದಲೋ ಏನೋ ಒಬ್ಬ ಹುಡುಗ ಎಲ್ಲರಿಗಿಂತ ಮುಂಚೆ ಊಟ ಮುಗಿಸಿ, "ಹರಿಃ ಓಂ" ಎಂದು ದೊಡ್ಡದಾಗಿ ಉದ್ಗರಿಸಿ ಎದ್ದು ಓಡಿದ. ಸ್ವಾಮೀಜಿಯವರೊಮ್ಮೆ ನಕ್ಕು, ತಮ್ಮ ಎಡಗೈಯನ್ನು ಆ ಕಡೆಯಿಂದ ಈ ಕಡೆಯವರೆಗೂ ಹಾಯಿಸಿ "Hurry home" ಎಂದಾಗ ಲೌಕಿಕ-ಧಾರ್ಮಿಕ ಸಮಾಗಮ ತುಂಬಾ ಅರ್ಥಪೂರ್ಣವೆನ್ನಿಸಿತು.

–ಎನ್. ಎಂ. ಕೃಷ್ಣಮೂರ್ತಿ



# 'ಜಂತರ್-ಮಂತರ್' ಕಥೆ

ಚಿತ್ರ– ಲೇಖನ: **ಎಸ್. ಸಿ. ದೇಸಾಯಿ**

ದಿಲ್ಲಿಯಲ್ಲಿ 'ಛೂ–ಮಂತರ್' ವಾದಿಗಳು ಬಹಳ. ಅವರೆಲ್ಲ ದೇಶದ ನಾನಾ ಭಾಗದಿಂದ ಇಲ್ಲಿಗೆ ಕಳಿಸಲ್ಪಟ್ಟವರು. ಇಂಥ 'ಛೂ–ಮಂತರ್' ವಾದಿಗಳು ನಮ್ಮ ಸಲುವಾಗಿ ನಿತ್ಯವೂ ಹೋ-(ಹಾ)ರಾಟ ನಡೆಸುವ ಲೋಕಸಭಾಭವನದ ಬೀದಿ(ಪಾರ್ಲಿಮೆಂಟ್ ಸ್ಟ್ರೀಟ್)ಯಲ್ಲಿ ಓಡಾಡುವಾಗ ಪುರಾತನವಾದ ಸುಂದರ ಉದ್ಯಾನವೊಂದು ಕಣ್ಣಿಗೆ ಬೀಳುತ್ತದೆ. ಈ ಉದ್ಯಾನದ ನಡುವೆ ಕೆಲ ವಿಚಿತ್ರವಾದ ವಾಸ್ತುಶಿಲ್ಪಗಳು ಕಾಣಿಸುತ್ತವೆ. ಅವುಗಳನ್ನು ನೋಡುತ್ತಿದ್ದಂತೆಯೇ ನಾವು ಮಂತ್ರಮುಗ್ಧರಾಗುತ್ತೇವೆ; ಎಂಥ ಕಟ್ಟಡಗಳಿವು ಎಂದು ಜಿಜ್ಞಾಸೆಗೊಳಗಾಗುತ್ತೇವೆ. ಎರಡು ಶತಮಾನ ಹಳೆಯದಾದ ಇವುಗಳನ್ನು ಗೈಡ್‌ಗಳು 'ಯಂತ್ರ'ಗಳೆಂದು ಪರಿಚಯಿಸುತ್ತಿದ್ದಂತೆಯೇ ನಮಗೆ ಇನ್ನಷ್ಟು ಅಚ್ಚರಿಯಾಗುತ್ತದೆ.

ಹೌದು. ಇವು 'ಯಂತ್ರ'ಗಳು. ಆದರೆ ಈಗಿನ ಅರ್ಥದ ಭಾರೀ ಮಶಿನುಗಳಲ್ಲ. ಗಾರೆ, ಕಲ್ಲು, ಇಟ್ಟಿಗೆಯಿಂದ ಕಟ್ಟಿದಂಥವುಗಳು. ಖಗೋಲ ಶಾಸ್ತ್ರದ ಅಧ್ಯಯನಕ್ಕಾಗಿ, ಗ್ರಹಗತಿಯ ಚಲನವಲನ ನಿರೀಕ್ಷಣೆಗಾಗಿ, ಜ್ಯೋತಿಷ್ಯ ಶಾಸ್ತ್ರದಲ್ಲಿ ಹೊಸ ಸಂಶೋಧನೆಗಾಗಿ ಮೊಗಲರ ಕಾಲದ ಕೊಡುಗೆ ಇದು. ಈ ಕಟ್ಟಡಗಳ ಗುಂಪಿಗೆ ಆಗಿನವರುಕೊಟ್ಟ ಹೆಸರೇ 'ಜಂತರ್ – ಮಂತರ್.' ಅಷ್ಟೇ ಅಲ್ಲ, ಇದೇ ಭಾರತದ ಪ್ರಪ್ರಥಮ ವೇಧಶಾಲೆ (astro-nomical obser-vatory).

ಜಂತರ್ – ಮಂತರ್ ನೋಡಲು ಎಷ್ಟು ಕುತೂಹಲಕಾರಿ ಆಗಿದೆಯೋ



ರಾಜಾ ಜಯಸಿಂಗ

## ಜಯಪುರ 'ಜಂತರ್-ಮಂತರ್'ನಲ್ಲಿ ಇರುವ ಯಂತ್ರಗಳು

೧ ಲಘು ಸಮ್ರಾಟ ಯಂತ್ರ
೨ ಧ್ರುವ-ದರ್ಶಕ ಯಂತ್ರ
೩ ನರಿವಾಲಯ
೪ ಧೂಪ ಘರಿ
೫ ಕ್ರಾಂತ ವೃತ್ತ ಯಂತ್ರ
೬ ಯಂತ್ರರಾಜ ಕರಿಕಾ
೭ ಉನ್ನತಾಂಶ ಯಂತ್ರ
೮ ದಕ್ಷಿಣೋವೃತ್ತಿ ಭಿತ್ತಿ ಯಂತ್ರ
೯ ಛತ್ರಿ
೧೦ ಬೃಹತ್ ಸಮ್ರಾಟ ಯಂತ್ರ
೧೧ ರಾಶಿವಲಯ (ಪ್ರತಿ ರಾಶಿಗೂ ಒಂದೊಂದು ಯಂತ್ರವಿದೆ.)
೧೨ "ಜಯಪ್ರಕಾಶ ಯಂತ್ರ"
೧೩ ಕಪಾಲಿ ಯಂತ್ರ
೧೪ ಚಕ್ರಯಂತ್ರ
೧೫ ರಾಮ ಯಂತ್ರ
೧೬ ದಿಗಂಶ ಯಂತ್ರ
ಮುಂತಾದವು.

ಈ ಯಂತ್ರಗಳ ಕಾರ್ಯ ವಿವರಣೆ ತಿಳಿಯಲು ಆತುರವಿರುವದು ಸಹಜ. ಆದರೆ ಅದನ್ನು ವಿವರವಾಗಿ ತಿಳಿಯಲು ಪ್ರತ್ಯಕ್ಷ ನೋಡುವುದೇ ಒಳ್ಳೆಯದು.

—ನಾ. ದೇ.

ಅದಕ್ಕಿಂತ ಕುತೂಹಲಕಾರಿಯಾಗಿದೆ ಅದರ ನಿರ್ಮಾಣದ ಹಿನ್ನೆಲೆ.

೧೭೧೯ನೆಯ ವರ್ಷ. ಕೆಂಪು ಕೋಟೆಯ 'ದರ್ಬಾರ್ ಖಾಸಾ'ದಲ್ಲಿ [illegible]ಗಳೂ, ಪಂಡಿತರೂ ನೆರೆದಿದ್ದಾರೆ. ಖಗೋಲಶಾಸ್ತ್ರ, ಜ್ಯೋತಿಷ್ಯದ ವಿಷಯವಾಗಿ ಬಿಸಿಯಾದ ಚರ್ಚೆ ನಡೆದಿದೆ. ಮೊಗಲ್ ಬಾದಶಹ ಮಹಮ್ಮದಶಾನಿಗೊಂದು ಶುಭ ಮುಹೂರ್ತ ಬೇಕಾಗಿದೆ. ಆದರೆ ನಾವು ಮುಹೂರ್ತ ನಿರ್ಧಾರಕ್ಕೆ ಕೆಲ ಗ್ರಹಗಳ ನಿಶ್ಚಿತ [illegible] ಅಸಾಧ್ಯವಾಗಿದ್ದು, ಕಾರಣ, ಆ [illegible] ಪರಿಹಾರ [illegible].

ಈ ಘಟನೆಯಿಂದ ಒಬ್ಬ ವ್ಯಕ್ತಿಯ ಮೇಲಾದ ಪರಿಣಾಮ ಮಾತ್ರ ಅಗಾಧ. ನಾವು ಮುಹೂರ್ತ ನಿರ್ಧಾರಕ್ಕೆ ಅತ್ತ ಬಂದದ್ದೇನು? ನಾವು ಎಲ್ಲಿ ತಪ್ಪಿದ್ದೇವೆ? ಗ್ರಹಗತಿಯ ಲೆಕ್ಕಾಚಾರದಲ್ಲೇನಾದರೂ ಎಡವಿದ್ದೇವೆಯೋ? ಎಂದೂ ಹೀಗಾಗಿರಲಿಲ್ಲ, ಇಂದೇ ಏಕೆ ಹೀಗೆ? – ರಾತ್ರಿಯಿಡೀ ಚಿಂತಿಸಿದ ಆತ. ಚಿಂತೆ ಫಲ ನೀಡಿತು. ಪರಿಹಾರ ಹೊಳೆಯಿತು.

ಮರುಮುಂಜಾನೆ ಬಾದಶಹ ವಾಯುವಿಹಾರಕ್ಕೆ ಹೊರಟಿದ್ದಾಗ ಅವನೊಂದಿಗೇ ಹಜ್ಜೆಯಿಕ್ಕುತ್ತಿದ್ದ ಈತ ತನ್ನ ಯೋಜನೆ ಹೇಳಿದ. ಸಂತೋಷಗೊಂಡ ಬಾದಶಹ ಕೂಡಲೇ ಆ ದಿಶೆಯಲ್ಲಿ ಮುಂದುವರಿಯುವಂತೆ ಅಪ್ಪಣೆ ಕೊಟ್ಟ. ಆ ಯೋಜನೆಯ ಫಲವೇ ಈ 'ಜಂತರ್-ಮಂತರ್'. ನೋಡುಗರನ್ನು ಮಂತ್ರಮುಗ್ಧರನ್ನಾಗಿಸುವ ಈ ಕಟ್ಟಡ ಸಮೂಹ ೧೭೨೪ರಲ್ಲಿ ತಲೆಯೆತ್ತಿತು.

ಆ ವ್ಯಕ್ತಿ ಸಾಮಾನ್ಯನೇನಲ್ಲ. ರಾಜಮನೆತನದವ. ಅಂಬರದ (ಇಂದಿನ ಜಯಪುರ) ಮಹಾರಾಜ ಸವಾಯಿ ಜಯಸಿಂಗ, ಬಾದಶಹ ಮಹಮ್ಮದಶಾನ ಆಪ್ತಮಿತ್ರ. ಸ್ವತಃ ಜ್ಯೋತಿಷ್ಯ, ಖಗೋಲಶಾಸ್ತ್ರದಲ್ಲಿ ಆಸ್ಥೆಯಿದ್ದವ. ಅಷ್ಟೇ ಅಲ್ಲ, ಅದರಲ್ಲಿ ಪಂಡಿತನೂ ಆಗಿದ್ದ.

*

ತನ್ನ ೧೩ನೆಯ ವಯಸ್ಸಿಗೇ ತಂದೆಯನ್ನು ಕಳಕೊಂಡ ಜಯಸಿಂಗ ಆ ಎಳವೆಯಲ್ಲೇ ಪಟ್ಟವೇರ–

ಬೇಕಾಯಿತು. ತಾಯಿಯು ಮಮತೆಯೊಂದಿಗೇ ರಾಜ್ಯಾಡಳಿತದ ಶಿಕ್ಷಣವನ್ನೂ ದೊರಕಿಸಿಕೊಟ್ಟಳು. ಬೇರೆ ಬೇರೆ ಕಡೆಯ ಪಂಡಿತರನ್ನೂ ಯುದ್ಧ ವಿದ್ಯಾ ಪ್ರವೀಣರನ್ನೂ ಕರೆಸಿ ಮಗನನ್ನು ತರಬೇತುಗೊಳಿಸಿದಳು. ಸಾಹಿತ್ಯ, ಕಲೆ ವಾಸ್ತುಶಿಲ್ಪ, ಗಣಿತ, ಖಗೋಳಶಾಸ್ತ್ರ, ಜ್ಯೋತಿಷ್ಯಗಳಲ್ಲಿ ಜಯಸಿಂಗ ಪ್ರವೀಣನಾದ.

ಆತನ ಗುರುಸಮೂಹದಲ್ಲಿ ವಿಖ್ಯಾತರಾದವರು ಜಗನ್ನಾಥ ಸಮ್ರಾಟರು. ಪ್ರಾಚೀನ ಜ್ಯೋತಿಷ್ಯ ವಿದ್ಯೆ, ಗಣಿತಗಳಲ್ಲಿ ಅವರಿಗೆ ಸರಿಸಮ ಅವರೇ. ಭಾಷಾಶಾಸ್ತ್ರದಲ್ಲೂ ಅಪ್ರತಿಮರು ಅವರು. ಜಯಸಿಂಗನಿಗೆ ಗಣಿತ, ಜ್ಯೋತಿಷ್ಯಗಳಲ್ಲೇ ಹೆಚ್ಚಿನ



'ಛತ್ರಿ' - ಇದೊಂದು ಎತ್ತರವಾದ ಕಟ್ಟಡ. ಪಕ್ಕದಲ್ಲಿ ಅಮೃತಶಿಲೆಗಳಿಂದ ನಿರ್ಮಿಸಲಾದ ವರ್ತುಲಗಳಿವೆ.

↑ 'ಯಂತ್ರ ರಾಜ' – ಎರಡು ಮೀಟರ್ ವ್ಯಾಸದ ಬೃಹದಾಕಾರದ ಜಾಗಟೆಗಳು. ಇವು ಎಲ್ಲ ಯಂತ್ರಗಳಿಗೂ ಎಣಿಕೆಯ ಮೂಲ. ಜಯಸಿಂಗನು ಈ 'ಯಂತ್ರ'ದ ಉಪಯೋಗ ಹೇಗೆ ಎಂಬುದರ ಬಗ್ಗೆ ಎರಡು ಹೊತ್ತಿಗೆಗಳನ್ನು ಬರೆದಿದ್ದಾನೆ

↓ 'ಭಿತ್ತಿ'ಯ ಅಮೃತಶಿಲೆಯ ವರ್ತುಲಗಳ ಮೇಲಿರುವ ಗಣಕದ ರೇಖೆಗಳು



↑ ದಿಲ್ಲಿಯ 'ಜಂತರ್ ಮಂತರ್'ನ ಒಂದು ಸೂರ್ಯ ಮಾಪಕ ಯಂತ್ರ.

'ರಾಮ ಯಂತ್ರ'ದ ಸಮೀಪ ಫೋಟ. ಸಲಾಕೆಯ (ಅ) ನೆರಳು (ಬ) ಹಾಗೂ ಗೋಡೆಯ ಮೇಲಿರುವ ರೇಖೆಗಳು ಗಣತಿಯ ಗೆರೆಗಳು. ↓

ಆಸ್ಥೆ. ಈ ಸಂಬಂಧದಲ್ಲಿ ಸಿಕ್ಕುವ ದೇಶವಿದೇಶಗಳ ಗ್ರಂಥಗಳನ್ನಾತ ಕಲಿಹಾಕಿದ. ಸೂರ್ಯಸಿದ್ಧಾಂತ ಹಾಗೂ ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ ಮತ್ತು ಭಾಸ್ಕರಾಚಾರ್ಯರಂಥ ಪಂಡಿತರ ಕೃತಿಗಳನ್ನು ಅರಗಿಸಿಕೊಂಡ.

೧೭೨೯ ಆತನ ಜೀವನದಲ್ಲಿ ಅಷ್ಟೆ ಏಕೆ ಖಗೋಲಶಾಸ್ತ್ರ, ಜ್ಯೋತಿಷಿಗಳ ಇತಿಹಾಸದಲ್ಲಿ ಒಂದು ಪರ್ವಕಾಲ. ಆತನು ಪಡೆದ ಜ್ಞಾನ ಪಾಂಡಿತ್ಯಗಳಿಗೊಂದು ಶಾಶ್ವತ ಮೂರ್ತರೂಪ ಕೊಟ್ಟದ್ದು ಆ ವರ್ಷವೇ. ಜಯಪುರದಲ್ಲಿ ಆಗಲೇ ಒಂದು 'ಜಂತರ್–ಮಂತರ್' ನಿರ್ಮಾಣ–ಕಾರ್ಯ ಆರಂಭಿಸಿದ. ಜತೆಗೇ ಹೊಸ ನಗರ (ಈಗಿನ ಜಯಪುರ)ದ ನಿರ್ಮಾಣದೆಡೆಗೂ ಆತ ಅಷ್ಟೇ ಆಸ್ಥೆವಹಿಸಿದ. ಅಂತೆಯೇ ಆ ನಗರಕ್ಕೆ ಆತನ ಹೆಸರು ಬಂತು. (ಆ ವಂಶಜರ ಸುಪ್ರಸಿದ್ಧ, ಇಂದಿಗೂ ಪ್ರೇಕ್ಷಣೀಯವಾಗಿರುವ, ಅಂಬರದ ಅರಮನೆ ಹಳೆಯ ನಗರದಲ್ಲಿದೆ. ಜಯಸಿಂಗನ ಜನನವಾದದ್ದು ಇಲ್ಲಿಯೇ.)

ಜಯಪುರ ನಗರ ನಿರ್ಮಾಣ ಆರಂಭವಾದದ್ದು ೧೭೨೭ ರ ನವೆಂಬರ್ ೧೮ ರಂದು. ಅದಕ್ಕೆ ಮೊದಲೇ ಅಲ್ಲಿಯ 'ಜಂತರ್–ಮಂತರ್'ನ ಕೆಲ ಪಾಲು ಕೆಲಸ ಮುಗಿದಿತ್ತು. ಅದು ಪೂರ್ಣವಾದದ್ದು ೧೭೩೦ರಲ್ಲಿ.

ತನ್ನ ಜೀವಮಾನದಲ್ಲಿ ಒಟ್ಟು ಐದು ನಿರೀಕ್ಷಣ ಕೇಂದ್ರಗಳನ್ನು ಜಯಸಿಂಗ ನಿರ್ಮಿಸಿದ. ಮೊದಲನೆಯದೆ ದಿಲ್ಲಿಯದು. ನಂತರ ಜಯಪುರ, ಉಜ್ಜಯಿನಿ, ಕಾಶಿ ಹಾಗೂ ಮಥುರಾಗಳಲ್ಲಿ.

*

ಜನಸಾಮಾನ್ಯರಿಗೆ ಅರ್ಥವಾಗದಂಥ ಈ ಕಟ್ಟಡಗಳು ಖಗೋಳ–ಜ್ಯೋತಿಷ ಶಾಸ್ತ್ರದ ಮಹಾ ಮಹಾ ಪ್ರಯೋಗಶಾಲೆಗಳಾಗಿದ್ದವು, ಘಟಾನುಘಟಿಗಳ ಚರ್ಚಾಕೇಂದ್ರಗಳಾಗಿದ್ದವು, ಈ ವಿಷಯದ ಅಭ್ಯಾಸಕ್ಕೆ ಆಲಯಗಳಾಗಿದ್ದವು. ದೇಶದ ಎಲ್ಲೆಡೆಯಿಂದಲೂ ಜ್ಯೋತಿಷ–ಖಗೋಳ ಶಾಸ್ತ್ರದ ಅಧ್ಯಯನೇಚ್ಛುಗಳು ಇಲ್ಲಿಗೆ ಬರುತ್ತಿದ್ದರು.

ರಾಜಾ ಸವಾಯಿ ಜಯಸಿಂಗ ಛಲವಾದಿ, ಸಿದ್ಧಾಂತವಂತ. ೧೭೦೭ರಲ್ಲಿ ಔರಂಗಜೇಬನ ಮರಣಾನಂತರ ಈ ಸಾಮ್ರಾಜ್ಯದ ಆಡಳಿತದಲ್ಲಿ ಶೈಥಿಲ್ಯ ಕಾಣಿಸತೊಡಗಿತ್ತು. ರಾಜಕೀಯ ಸ್ಥಿತಿ ಹದಗೆಡುತ್ತಲಿತ್ತು. ಮೊಗಲ ಸಾಮ್ರಾಜ್ಯದ ಪತನವಾಗುವುದೆಂದೇ ನಂಬಿದ್ದ ಕಾಲವೂ ಅದಾಗಿತ್ತು. ಎಲ್ಲಿ ನೋಡಿದಲ್ಲಿ ಅಶಾಂತಿ ಒಳಜಗಳಗಳು, ಚಿಕ್ಕ ಪುಟ್ಟ ಯುದ್ಧಗಳು. ಆದರೆ ಜಯಸಿಂಗ ಮಾತ್ರ ಇವಾವುದರೆಡೆಗೂ ಲಕ್ಷ್ಯ ಹಾಕಲಿಲ್ಲ–ಹಿಡಿದ ಛಲ ಸಾಧಿಸದೆ ಬಿಡಲಿಲ್ಲ.

ವಿಜ್ಞಾನ ಊಹಾತೀತವಾಗಿ ಮುಂದುವರೆಯುತ್ತಿರುವ ಈ ದಿನಗಳಲ್ಲಿ ಖಗೋಲಶಾಸ್ತ್ರದಲ್ಲಿ ಅದ್ಭುತಗಳನ್ನು ಅರಿಯುತ್ತಿದ್ದೇವೆ. ಹವಾಮಾನದ ಮುನ್ಸೂಚನೆಯಿಂದ ಮೊದಲುಗೊಂಡು ಎಲ್ಲವನ್ನೂ ವಿವರಿಸುವ, ಕಂಡುಹಿಡಿಯುವ ಯಂತ್ರ ಸಲಕರಣೆಗಳಿಂದು ಬಂದಿವೆ. ಆದರೆ ಇದನ್ನು ಎರಡು ಶತಮಾನದ ಹಿಂದೆಯೇ ಸಾಧಿಸಿದ ಜಯಸಿಂಗನ ಜಾಣ್ಮೆಗೆ ಇಂದಿನ ವಿಜ್ಞಾನ ತಲೆಬಾಗಲೇಬೇಕು.

'ಜಂತರ್–ಮಂತರ್'ನ ತಾಂತ್ರಿಕ ವಿವರಣೆ ವರ್ಣಿಸಲಸಾಧ್ಯವಾದದ್ದು. ಶಬ್ದಗಳಿಂದ ಅದನ್ನು ವಿವರಿಸುವುದು ಸುಲಭವೂ ಅಲ್ಲ. ಗ್ರಹ–ನಕ್ಷತ್ರಗಳ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವ ಯಂತ್ರವೊಂದರ ಉದಾಹರಣೆ ನೋಡಿ. ಬಟ್ಟಲಿನ ಆಕಾರದ ಬೃಹತ್ ಯಂತ್ರವದು. ಅದರಲ್ಲಿ ನಿಶ್ಚಿತಪಡಿಸಿದ ಜಾಗದಲ್ಲಿ ಮಲಗಿ ಮೇಲಿರುವ ರಂಧ್ರಗಳಿಂದ ನೋಡಿದರೆ ಗ್ರಹ–ನಕ್ಷತ್ರಗಳ ಬಗ್ಗೆ ಅರಿವುಂಟಾಗುತ್ತದೆ. ಇದೇ ರೀತಿ ಉಳಿದ ಕಟ್ಟಡಗಳಲ್ಲಿಯೂ 'ವೀಕ್ಷಣೆ'ಯ ಕ್ರಮವಿದೆ. ಆದರೆ ಅನುಭವ ಮಾತ್ರ ಅನುಭವಿಸಿದರೇ ಗೊತ್ತಾಗುವಂಥದ್ದು.

ರಾಜಾ ಜಯಸಿಂಗನನ್ನು 'ಖಗೋಲ ರಾಜ'– 'ಜ್ಯೋತಿಷ್ಯ ರಾಜ' ಎಂದರೆ ತಪ್ಪೇನಿಲ್ಲ. ✡

(ಇದು ರಜತೋತ್ಸವ ಸಂಚಿಕೆಗಾಗಿ ಆಮಂತ್ರಿತ ಲೇಖನ)

# ನಿಮಗೆ ನಿಮ್ಮ ಮಕ್ಕಳ ಭವಿಷ್ಯದ ಬಗ್ಗೆ ಚಿಂತೆಯೇ?



ಬಿಡಿಸಿದಷ್ಟೂ ಬಿಗಿಯಾಗುವ ಪ್ರಪಂಚ! ನಿಮ್ಮ ಮಗುವಿನ ಭವಿಷ್ಯ ನಿಮ್ಮ ಕೈಯಲ್ಲಿದೆ! ಆತನಿಗೆ ಯೋಗ್ಯವಾದ ಶಿಕ್ಷಣವನ್ನು ಕೊಡುವಲ್ಲಿ ನೀವು ಸತತ ಶ್ರಮವಹಿಸುವಿರಿ.

**ಕೆನರಾ ಬ್ಯಾಂಕ್** ನಿಮ್ಮ ಶ್ರಮವನ್ನು ಸುಲಭಗೊಳಿಸುತ್ತದೆ. ಇಂದೇ—ನಿಮ್ಮ ಮಗುವಿನ್ನೂ ಚಿಕ್ಕವನಿರುವಾಗಲೇ, ಆತನ ಅವಶ್ಯಕತೆಗಳು ಕಡಿಮೆ ಇರುವಾಗಲೇ—ಉಳಿತಾಯ ಆರಂಭಿಸಿರಿ. ಆತ ಬೆಳೆಯುತ್ತಿದ್ದಂತೆಯೇ, ಆತನ ಅವಶ್ಯಕತೆಗಳು ಹೆಚ್ಚುತ್ತಿದ್ದಂತೆಯೇ ನಿಮ್ಮ ಉಳಿತಾಯವು ಬೆಳೆಯುತ್ತಿರುತ್ತದೆ. ಮುಂದಾಗಿಯೇ ಜವಾಬ್ದಾರಿಯನ್ನರಿತ ನಿಮ್ಮ ಶ್ರಮ ಸಾರ್ಥಕವೆನಿಸುತ್ತದೆ.

**ಕೆನರಾ ಬ್ಯಾಂಕಿನಲ್ಲಿ** ನಿಮ್ಮ ಅವಶ್ಯಕತೆಗಳಿಗನುಕೂಲವಾಗುವಂತೆ ರೂಪಿಸಿದ ವಿವಿಧ ಠೇವಣಿ ಯೋಜನೆಗಳಿವೆ—

**ವಿದ್ಯಾನಿಧಿ ಠೇವಣಿ ಯೋಜನೆ**—ನಿಮ್ಮ ಮಕ್ಕಳೊಂದಿಗೆ ಠೇವಣಿಯೂ ಬೆಳೆದು ಮಕ್ಕಳ ಶಿಕ್ಷಣದ ಉಸ್ತುವಾರಿ ವಹಿಸುತ್ತದೆ.

**ನಿರಂತರ ಠೇವಣಿ ಯೋಜನೆ**—ಪ್ರತಿ ತಿಂಗಳು ನಿಮ್ಮ ಸಣ್ಣ ಉಳಿತಾಯ ಏಳು ವರ್ಷಗಳಲ್ಲಿ ಬೆಳೆದು, ಮುಂದೆ ತಿಂಗಳು ತಿಂಗಳೂ ವರ್ಷಗಟ್ಟಲೆ ನಿಮಗೇ ಸೇರುತ್ತದೆ. ಅಸಲು ಭದ್ರವಾಗಿಯೂ ಉಳಿಯುತ್ತದೆ.

ನಮ್ಮ ಯಾವುದೇ ಶಾಖೆಗೆ ಇಂದೇ ಭೇಟಿ ಕೊಡಿರಿ. **ಕೆನರಾ ಬ್ಯಾಂಕ್** ನಿಮ್ಮ ಹೊಣೆಗಾರಿಕೆಯಲ್ಲಿ ತಾನೂ ಪಾಲುಗೊಳ್ಳುತ್ತದೆ.

ನಮ್ಮ ಇತರ ಠೇವಣಿ ಯೋಜನೆಗಳು — **ಕಾಮಧೇನು, ಸೇವಿಂಗ್ಸ್ ಬ್ಯಾಂಕ್, ರಿಕರಿಂಗ್ ಮತ್ತು ನಿರಖು ಠೇವಣಿ ಯೋಜನೆಗಳು**

**ಕೆನರಾ ಬ್ಯಾಂಕ್**



(ಒಂದು ರಾಷ್ಟ್ರೀಕೃತ ಬ್ಯಾಂಕ್)

**ರಾಷ್ಟ್ರದಾದ್ಯಂತ 1,300 ಕ್ಕೂ ಹೆಚ್ಚು ಶಾಖೆಗಳು**

imaa (S) CB 13

# ಹರ್ಷೋತ್ಸಾಹಗಳ ರಜತ ವರ್ಷೋತ್ಸವ

**ಶಿವಾನಂದ ಜೋಶಿ**

ಭಾರತದಲ್ಲಿ ಒಂದು ಪತ್ರಿಕೆಯು ೨೫ ವರ್ಷಗಳ ಅವಿರತ ಬದುಕು ಸಂಭ್ರಮಿಸಬೇಕಾದ ಪ್ರಸಂಗ. ಆಯುಷ್ಯ ಸವೆಸುವುದರಲ್ಲಿಯೇ ಬದುಕಿನ ಸಾರ್ಥಕತೆ ಇಲ್ಲ. ಅದು ಅರ್ಥಪೂರ್ಣವಾಗಿದ್ದರೆ, ಸಂಕಲ್ಪ ಮಾಡಿಕೊಂಡ ಉದ್ದೇಶ ಸಾಧನೆಯಲ್ಲಿ ಮುಂದಡಿ ಇರಿಸಿದ್ದರೆ ೨೫ ವರ್ಷಗಳ ಬದುಕು ದೊಡ್ಡದಲ್ಲ. ನಿರಂತರ ಪ್ರಗತಿಯ ಮಾರ್ಗದಲ್ಲಿ ಕೆಲವು ಮೈಲುಗಲ್ಲುಗಳು, ಅಷ್ಟೆ. ಕನ್ನಡ ಸಾರಸ್ವತ ಪ್ರಪಂಚದಲ್ಲಿ ಜ್ಞಾನದ ಬೆಳಕನ್ನೂ ಮನೋರಂಜನದ ಪರಿಮಳವನ್ನೂ ಬೀರುತ್ತ ೨೫ ಮೈಲುಗಲ್ಲುಗಳನ್ನು ದಾಟಿ ಬಂದಿರುವ 'ಕಸ್ತೂರಿ'ಗೆ ಸಾರ್ಥಕ ಭಾವನೆಗಿಂತ ಹೆಚ್ಚಾಗಿ ಮುಂದಿನ ಮೈಲುಗಲ್ಲುಗಳ ಮೇಲೆ ಗಮನ ಹೆಚ್ಚು.

ತನ್ನ ಓದುಗರನ್ನು ಗುರುತಿಸಿಕೊಂಡು ಅವರ ಅಭಿಮಾನದ ಆಸರೆಯಲ್ಲಿ ಬೆಳೆದ, ಹೊಸ ತಲೆಮಾರಿನ ಓದುಗರೊಂದಿಗೆ ಬೆಳೆಯುತ್ತಲೇ 'ಕಸ್ತೂರಿ' ೧೯೮೧ರ ಆಗಸ್ಟ್ ೩೦ ರಂದು ಆಚರಿಸಿದ ರಜತೋತ್ಸವ ಸಂಭ್ರಮಿಸುವ ಸಂದರ್ಭ ಮಾತ್ರ ಆಗಿರಲಿಲ್ಲ; ಕನ್ನಡ ಕುಲಕೋಟಿಗೆ ಕೃತಜ್ಞತೆ ಸಲ್ಲಿಸುವುದರೊಂದಿಗೆ ತನ್ನ ಸೇವೆಯನ್ನು ನಮ್ರವಾಗಿ ಮುಂದುವರಿಸುವ ಭರವಸೆಯನ್ನು ನೀಡುವ ಸಮಯವೂ ಆಗಿತ್ತು.

ಹುಬ್ಬಳ್ಳಿಯ ಕರ್ನಾಟಕ ವಾಣಿಜ್ಯೋದ್ಯಮ ಸಂಘದ ಸಭಾಗೃಹದಲ್ಲಿ ಅದೊಂದು ವಿಶಿಷ್ಟ ಸಮಾರಂಭ. 'ಕಸ್ತೂರಿ'ಯನ್ನು ಕಟ್ಟಿ, ಬೆಳೆಸಿ

**೧೯೫೮ ರಲ್ಲಿ ಜರುಗಿದ 'ಸಂಯುಕ್ತ-ಕರ್ನಾಟಕ'ದ ಬೆಳ್ಳಿ ಹಬ್ಬಕ್ಕೆ ಆಗಿನ ಕ.ವಿ.ವಿ.ಯ ಕುಲಪತಿ ದಿವಂಗತ ಡಿ.ಸಿ. ಪಾವಟೆ ಮುಖ್ಯ ಅತಿಥಿ. 'ಕಸ್ತೂರಿ'ಯ ಬೆಳ್ಳಿ ಹಬ್ಬಕ್ಕೆ ಈಗಿನ ಕುಲಪತಿ ಮುಖ್ಯ ಅತಿಥಿ. ಇದೊಂದು ಯೋಗಾಯೋಗ, ಒಂದು ಸಂತಸಕರ ಸ್ಮರಣೆ. ಡಾ. ನಂಜುಡಂಪ್ಪ ಪ್ರಸಂಗದ ಸವಿಯನ್ನು ಮೆಲುಕುಹಾಕಿದರು. 'ಕಸ್ತೂರಿ'ಯನ್ನು ತಾವು ಮಾಸ್ಕೋದಲ್ಲಿಯೂ ಕಂಡಿರುವುದಾಗಿ ಹೇಳಿ ಅಭಿಮಾನಪಟ್ಟರು.**



'ಕಸ್ತೂರಿ'ಯ ಕಂಪು ಹರಡಿದ ಆಚಾರ್ಯರಿಗೆ ಕುಲಪತಿಗಳಿಂದ ಸನ್ಮಾನ

ಪ್ರಬುದ್ಧಾವಸ್ಥೆಗೆ ತಂದ ಹಿರಿಯರು ಮತ್ತು ಅದರ ಪರಿಮಳವನ್ನು ಸೇವಿಸಿ ಸೈ ಎಂದು ಸಂತೋಷಪಟ್ಟ ಸಹೃದಯರ ಸಮ್ಮುಖದಲ್ಲಿ "ಕಸ್ತೂರಿಯಿಂದ ಕಲಿತೆ" ಎಂದು ಅಭಿಮಾನ ಪಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಡಾ. ಡಿ. ಎಂ. ನಂಜುಂಡಪ್ಪ ಅವರು ಅದರ ೩೦೧ನೇ ಸಂಚಿಕೆಯನ್ನು ಕನ್ನಡ ಸಾರಸ್ವತ ಪ್ರಪಂಚಕ್ಕೆ ಅರ್ಪಿಸಿದರು. 'ಕಸ್ತೂರಿ'ಗೆ ಬೆಳೆಯುವ ಪ್ರಜ್ಞೆಯೊಂದಿಗೆ ಕೃತಜ್ಞತೆಯ ಭಾವವೂ ಇದೆ. ತನ್ನನ್ನು ೧೮ ವರ್ಷ ಕಾಲ ಪೋಷಿಸಿ ಬೆಳೆಸಿ ಕನ್ನಡದ ಕೈಂಕರ್ಯಕ್ಕೆ ಅಣಿಗೊಳಿಸಿದ ಸಂಸ್ಥಾಪಕ–ಸಂಪಾದಕ ಶ್ರೀ ಪಾಡಿಗಾರು ವೆಂಕಟರಮಣ ಆಚಾರ್ಯ(ಪಾವೆಂ)ರನ್ನು ಮತ್ತು ಎರಡು ವರ್ಷ ಸಂಪಾದಕರಾಗಿ ಸಲುಹಿದ ಶ್ರೀ ದ. ಲ. ಕಿರೂರ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಿ, ಅವರ ಸೇವೆಯನ್ನು ಸ್ಮರಿಸಿ ಅವರಿಂದ ಸ್ಫೂರ್ತಿಯನ್ನು 'ಕಸ್ತೂರಿ' ಪಡೆಯಿತು. ಡಾ. ನಂಜುಂಡಪ್ಪ ಅವರು ಹಿರಿಯರಿಬ್ಬರಿಗೂ ಹಾರ ಹಾಕಿ, ಶಾಲು ಹೊದಿಸಿ ಸಂಸ್ಥೆಯ ಪರವಾಗಿ ಕಾಣಿಕೆ ಅರ್ಪಿಸಿದರು.

'ಕಸ್ತೂರಿ'ಗೆ ಹಾಲುಣಿಸಿದ 'ಸಂಯುಕ್ತ ಕರ್ನಾಟಕ'ದೊಂದಿಗೆ ತಮಗೆ ಅಂಟಿ ಬಂದ ಸಂಬಂಧ ಮತ್ತು 'ಕಸ್ತೂರಿ' ತಮಗೆ ಧಾರೆ ಎರೆದ ಜ್ಞಾನಸಂಪತ್ತನ್ನು ಅಭಿಮಾನಪೂರ್ವಕ ಸ್ಮರಿಸಿಕೊಂಡ ಕುಲಪತಿಗಳು ಮಾತುಮಾತಿಗಳಿಂದ ಹೊರಸೂಸುವ 'ಕಸ್ತೂರಿ'ಯ ಕಂಪನ್ನು ಕೇಳುಗರ ವೃಂದಕ್ಕೆ ಉಣಬಡಿಸಿದರು. "'ಕಸ್ತೂರಿ'ಯ ಕಂಪಿಗೆ ಸರಿಸಾಟಿಯಿಲ್ಲ. 'ಕಸ್ತೂರಿ'ಗೆ ಮಾದರಿಯಾದ 'ರೀಡರ್ಸ್ ಡೈಜೆಸ್ಟ್'ನಲ್ಲಿ ಇಂಗ್ಲಿಷ್ ಸಾಹಿತ್ಯದ ಸಾರ ಸಂಗ್ರಹ ಇದ್ದರೆ 'ಕಸ್ತೂರಿ'ಯಲ್ಲಿ ವಿಶ್ವಸಾಹಿತ್ಯದ ವಿರಾಟ್ ರೂಪದ ಸಂಕ್ಷಿಪ್ತ ದರ್ಶನ ಸಿಕ್ಕುತ್ತದೆ. ವಿಜ್ಞಾನ ಕಲೆ, ಕ್ರೀಡೆ, ಸಾಹಿತ್ಯ, ಸಂಶೋಧನೆಗಳಲ್ಲಿ ಆಸಕ್ತಿ ಉಳ್ಳವರಿಗೆ ಪ್ರೇರಕ ಶಕ್ತಿ ಈ 'ಕಸ್ತೂರಿ'" ಎಂದು ಡಾ. ನಂಜುಂಡಪ್ಪ ತುಂಬಿದ ಮನಸ್ಸಿನಿಂದ ಹೇಳಿದರು. 'ಕಸ್ತೂರಿ'ಯ ಶಬ್ದ ಭಾಂಡಾರ ಮತ್ತು ಜೀವನ ದರ್ಶನ ಮಾಡಿಸುವ ಲೇಖನಗಳಿಂದ ತಾವು ಪಡೆದಿರುವ ಪ್ರಯೋಜನವನ್ನು ಅವರು ವಿವರಿಸಿದರು.

'ಕಸ್ತೂರಿ'ಗೆ ಇಪ್ಪತ್ತೈದು ತುಂಬಿದ ವರ್ಷದಲ್ಲಿ ಅದರ ರಜತೋತ್ಸವ ಸಂಚಿಕೆಯನ್ನು ತಮ್ಮಲ್ಲಿ ಮತ್ತೊಮ್ಮೆ ಬಿಡುಗಡೆ ಮಾಡಿ ಸಂಭ್ರಮಪಟ್ಟವರು ಹೊನ್ನಾಳಿ(ಶಿವಮೊಗ್ಗ ಜಿಲ್ಲೆ)ಯ ಜನ. ಆ ಜಿಲ್ಲೆಯ ಸಂಯುಕ್ತ ಕರ್ನಾಟಕದ ಪ್ರತಿನಿಧಿ ಎಂ. ಈಶ್ವರಪ್ಪ ಸ್ವಯಂಸ್ಫೂರ್ತಿಯಿಂದ ಸಡಗರದ ಸಮಾರಂಭವೇರ್ಪಡಿಸಿ, 'ಕಸ್ತೂರಿ'ಗೆ ಹಿರೇಕಲ್ಮಠದ ಒಡೆಯರ್ ಶ್ರೀ ಚಂದ್ರಶೇಖರ ಮಹಾಸ್ವಾಮಿಗಳಿಂದ ಸಾವಿರ ವರ್ಷಗಳ ದೀರ್ಘಾಯುಷ್ಯದ ಆಶೀರ್ವಾದ ಕೊಡಿಸಿದರು. ಅಲ್ಲಿಯ ಪುರಜನ, ಪೌರಸಭೆಯ ಅಧಿಕಾರಿ ವರ್ಗಕ್ಕೆ, ಆ ಜಿಲ್ಲೆಯ ಜನಕ್ಕೆ 'ಕಸ್ತೂರಿ'ಯ ಮೇಲಿರುವ ಅಭಿಮಾನದ ದ್ಯೋತಕ ಸಪ್ಟೆಂಬರ್ ೭ ರ ಈ ಪ್ರಸಂಗ.

[illegible] ಅಗ್ರಗಣ್ಯ ಆರಾಧಕರಲ್ಲಿ ಒಬ್ಬ ಪ್ರೊಫೆಸರ್ ರಾ.ಯ. ಧಾರವಾಡಕರ ಅವರು ಅಂದಿನ ಸಮಾರಂಭದ ಅಧ್ಯಕ್ಷರು. 'ಕಸ್ತೂರಿ'ಯ [illegible] ಬೆಳಗಿಕೊಂಡ ಸ್ವಾರಸ್ಯವನ್ನು, ರಸನಿಮಿಷ [illegible] ಅವರು ಮೆಲುಕು ಹಾಕಿದರು. "ಹಳಬರು-ಹೊಸಬರ ನಡುವೆ ಹೊಂದಾಣಿಕೆ ಕಾಣದ ಇಂದಿನ ದಿನಗಳಲ್ಲಿ 'ಕಸ್ತೂರಿ' ತಲೆಮಾರುಗಳ ಅಂತರಕ್ಕೆ ಸೌಹಾರ್ದದ ಬೆಸುಗೆ ಹಾಕಿದೆ," ಎಂದು ಅವರಿಗೆ ಸಂತೋಷ.

ಶ್ರೀ ಪಾವೆಂ. ಅವರಿಗೆ, ಸನ್ಮಾನಕ್ಕಿಂತಲೂ 'ಕಸ್ತೂರಿ' ತಮ್ಮನ್ನು ಸದಾ ಸ್ಮರಿಸುತ್ತಿದೆ ಎಂಬುದರಿಂದಲೇ ಹೆಚ್ಚು ಸಂತೋಷ. "ಕೊಟ್ಟ ಕೆಲಸ ಯಾವುದೇ ಇರಲಿ ಒಲ್ಲೆ ಎಂದು ಗೊತ್ತಿಲ್ಲ ನನಗೆ, 'ಕಸ್ತೂರಿ'ಯ ಹೊಣೆ ಬಿದ್ದಾಗ ಅದಕ್ಕೂ ಹೆಗಲು ಕೊಟ್ಟೆ. 'ಕಸ್ತೂರಿ'ಗಾಗಿ ಏನು ಮಾಡಬೇಕು, ಏನು ಮಾಡಬಲ್ಲೆ ಎಂಬುದರ ಸ್ಪಷ್ಟ ಅರಿವು ಇದ್ದುದರಿಂದಲೇ ಯಶಸ್ವಿಯಾದೆ," ಎನ್ನುವ ಸಮಾಧಾನ ಅವರಿಗೆ.

"ನನಗೆ ದುಡಿತದ ದಾಹ ಹೆಚ್ಚು. ಜ್ಞಾನವನ್ನು ಅದು ಎಲ್ಲಿಯೇ ಇರಲಿ, ತೆರೆದ ಬಾಹುಗಳಿಂದ ಬಾಚಿಕೊಳ್ಳುವ ಹವ್ಯಾಸ ನನ್ನದು. ನಾನೂ ದುಡಿದೆ, ನನ್ನೊಡನೆ ಇದ್ದವರನ್ನೂ ದುಡಿಸಿದೆ," ಎನ್ನುವ ಅವರಿಗೆ ತಮ್ಮಿಂದ ಕೆಲವರಿಗೆ ತೊಂದರೆ ಆಯಿತೇನೋ ಎಂದು ಅಳುಕು. ಜೊತೆಗೆ ತಮ್ಮನ್ನು ಸೈರಿಸಿಕೊಂಡ ಸತಿಗೂ ಅವರಿಂದ ಕೃತಜ್ಞತೆ.

ಕವಿ ಹೃದಯದ ಶ್ರೀ ಕೆರೂರ ಅವರಿಗೆ 'ಕಸ್ತೂರಿ'ಯ ಪಟ್ಟ ಕಾಯ್ದುಕೊಂಡು ಹೋದುದಕ್ಕಾಗಿ ಸಂತೋಷ; ತಮ್ಮ ಕಾಲದಲ್ಲಿ 'ಕಸ್ತೂರಿ' ಮಾಸಲಿಲ್ಲ, ಮುಸುಕಾಗಲಿಲ್ಲ; ಆಚಾರ್ಯರು ಕೊಟ್ಟ ರೂಪಕ್ಕೆ ಕುಂದು ಬರಲಿಲ್ಲ ಎನ್ನುವ ಸಮಾಧಾನ. ✡



ಶಿಕ್ಷಣದ ರಹಸ್ಯ ಗುಣವನ್ನು ಗೌರವಿಸುವುದಲ್ಲಡಗಿದೆ.

—ಎಮರ್ಸನ್

ನೀವು ಜೀವನವನ್ನು ಪ್ರೀತಿಸಿದರೆ, ಜೀವನವೇ ನಿಮ್ಮನ್ನು ಪ್ರೀತಿಸತೊಡಗುತ್ತದೆ.

—ಆರ್ಥರ್ ರುಬಿನ್‌ಸ್ಟೈನ್

ಸುದ್ದಿಯನ್ನು ಇದ್ದಕ್ಕಿದ್ದಂತೆ ವರದಿ ಮಾಡುವುದು ಪತ್ರಿಕೆಯ ಕೆಲಸವಲ್ಲ, ಸುದ್ದಿಗೆ ಗುದ್ದು ಕೊಟ್ಟು-ಸದ್ದುಂಟಾಗುವಂತೆ ಮಾಡುವುದೂ ಅದರ ಕರ್ತವ್ಯ.

—ಮಾರ್ಕ್ ಟ್ವೇನ್



## ಅವನಿಗೆ 3 ತಿಂಗಳಾದಾಗ, ಹಾಲು ಒಂದೇ ಸಾಕಾಗುವುದಿಲ್ಲ

# ನಿಮ್ಮ ಮಗುವಿಗೆ ಬೇಕು ಫೇರೆಕ್ಸ್

## ಮಗುವಿನ ಆದರ್ಶ ಘನ ಆಹಾರ

### 3 ತಿಂಗಳು—ಘನ ಆಹಾರ ಕೊಡಲು ಸಮಯ.

3 ತಿಂಗಳಾದಾಗ, ಮಗುವಿನ ಬೆಳೆಯುತ್ತಿರುವ ಬೇಡಿಕೆಗಳಿಗೆ ಹಾಲು ಒಂದೇ ಸಾಕಾಗುವದಿಲ್ಲ. ಮಗು ನಲಿದಾಡುತ್ತದೆ ಮತ್ತು ತ್ವರಿತಗತಿಯಿಂದ ಬೆಳೆಯುತ್ತದೆ. ಹಾಲು ಒದಗಿಸುವದಕ್ಕಿಂತ ಹೆಚ್ಚು ಕ್ಯಾಲೊರಿಗಳು ಮತ್ತು ಕಬ್ಬಿಣ ಸತ್ವ ಬೇಕಾಗುತ್ತವೆ. ನಿಮ್ಮ ಮಗುವಿಗೆ ದ್ರವರೂಪಿ ಆಹಾರ ಕಡಿಮೆಗೊಳಿಸುವಂತಹ, ಕೇಂದ್ರೀಕೃತ ರೂಪದಲ್ಲಿ ಹೆಚ್ಚು ಕ್ಯಾಲೊರಿ ಕೊಡುವಂತಹ ಮತ್ತು ಅಗಿದು ತಿನ್ನಲು ಕಲಿಸುವಂತಹ ಘನ ಆಹಾರದ ಅವಶ್ಯಕತೆ ಇರುತ್ತದೆ.

### ಡಾಕ್ಟರರು ಫೇರೆಕ್ಸ್ ಶಿಫಾರಸು ಮಾಡುತ್ತಾರೆ, ಏಕೆ?

ಕ್ರಮೇಣ ಘನ ಆಹಾರವನ್ನು ಪ್ರಾರಂಭಿಸಲಿಕ್ಕಾಗಿ ವಿಶೇಷವಾಗಿ ತಯಾರಿಸಿದ ಘನ ಆಹಾರ ಫೇರೆಕ್ಸ್. ಇದರಲ್ಲಿ ಕಾರ್ಬೋಹೈಡ್ರೇಟ್ಸ್, ಫ್ಯಾಟ್ಸ್, ಕ್ಯಾಲ್ಸಿಯಮ್, ಫಾಸ್ಫರಸ್ ಹಾಗೂ ವಿಟಮಿನ್‌ಗಳಿವೆ. ಫೇರೆಕ್ಸ್‌ನಲ್ಲಿ ಮಗುವಿನ ಬೆಳವಣಿಗೆಗೆ ಅಗತ್ಯವಾದ ಕಬ್ಬಿಣ ಸತ್ವವೂ ತುಂಬಿದೆ. ಈ ಕಾರಣಗಳಿಂದ, ಮಗುವಿನ ಸರ್ವಾಂಗೀಣ ಬೆಳವಣಿಗೆಗೆ ಫೇರೆಕ್ಸ್ ಆದರ್ಶ ಘನ ಆಹಾರವಾಗಿದೆ.

**ಉಚಿತ!** ಮಗುವಿನ ಮೊದಲ ವರ್ಷದ ಕುರಿತಾದ ಪುಸ್ತಿಕೆ. ಇದರ ಪ್ರತಿಯನ್ನು ಉಚಿತವಾಗಿ ಪಡೆಯಲು, ಅಂಚೆವೆಚ್ಚಕ್ಕಾಗಿ 50 ಪೈಸೆ ಸ್ಟ್ಯಾಂಪಿನೊಂದಿಗೆ ಬರೆಯಿರಿ:

**ಪಿ. ಓ. ಬಾಕ್ಸ್ ನಂ. 19119,**
**(FAR 93 T)**
**ಬೊಂಬಾಯಿ-400 025.**




**ಡಾಕ್ಟರರು ಶಿಫಾರಸು ಮಾಡುತ್ತಾರೆ—ಫೇರೆಕ್ಸ್**
**ಮಗುವಿನ ಆದರ್ಶ ಘನ ಆಹಾರ— ಶೀಘ್ರ ಸರ್ವಾಂಗೀಣ ಬೆಳವಣಿಗೆಗಾಗಿ**

CASGLF 10-163 Kan

# ಒಂದು ಹಳೆಯ ಅನಿಸಿಕೆ

ಮೂಲ :
**ಫ್ರಾಂಜ್ ಕಾಫ್ಕಾ**

ಅನುವಾದ :
**ಸಿ. ಆರ್. ಮಂಜುನಾಥ**

ನಮ್ಮ ರಾಜ್ಯದಲ್ಲಿ ಈಗ ಕಾನೂನು ಹಾಗೂ ರಕ್ಷಣಾ ವ್ಯವಸ್ಥೆ ವಿಪರೀತ ಹದಗೆಟ್ಟಿದೆ. ರಾಜ, ಪ್ರಧಾನಿ, ಮಂತ್ರಿಗಳು, ವಿದ್ಯಾವಂತರು ಈ ಪರಿಸ್ಥಿತಿಯನ್ನು ಗಮನಿಸಿಯೂ ತುಟಿ ಪಿಟಕ್ಕೆನ್ನದೆ ತಮ್ಮ ಜೀವನವನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ನಾವು ಬೆಳಗ್ಗೆ ನಮ್ಮ ಕೆಲಸಕ್ಕೆ ಹೊರಡುವ ವೇಳೆಯಲ್ಲಿ ಈ ದೊಡ್ಡ ಕೊರತೆಯನ್ನು ಎಲ್ಲಾ ಕಡೆಯಲ್ಲಿಯೂ ಕಾಣುತ್ತೇವೆ. ಇಲ್ಲಿ ನಡೆಯುತ್ತಿರುವ ಅನಾಹುತಗಳು ನಮ್ಮನ್ನು ನಿರಾತಂಕವಾಗಿ ಜೀವನ ನಡೆಸುವುದಕ್ಕೆ ಬಿಡದೆ, ಪದೇ ಪದೇ ತೊಂದರೆಯನ್ನು ಅನುಭವಿಸುತ್ತಿದ್ದೇವೆ.

ನಾನು ಒಬ್ಬ ಚಮ್ಮಾರ. ರಾಜನ ಮನೆಯ ಎದುರುಗಡೆ ಇರುವ ಚೌಕದಲ್ಲಿ ನಾನು ಅಂಗಡಿಯನ್ನು ನಡೆಸುತ್ತಿದ್ದೇನೆ. ದಿನವೂ ಸೂರ್ಯ ಉದಯಿಸುವುದರೊಳಗೆ ಬಾಗಿಲು ತೆಗೆಯುವುದು ನನ್ನ ಅಭ್ಯಾಸ. ಆಗ ಪ್ರತಿಯೊಂದು ಗಲ್ಲಿ, ರಸ್ತೆ, ಚೌಕಗಳಲ್ಲಿ ಗಸ್ತು ತಿರುಗುತ್ತಿರುವ ಸೈನಿಕರನ್ನು ಕಾಣುತ್ತೇನೆ. ಆದರೆ ಈ ಸೈನಿಕರು ನಮ್ಮ ದೇಶದವರಲ್ಲ, ಉತ್ತರ ಭಾಗದ ಯಾವುದೋ ಪ್ರದೇಶದಿಂದ ಬಂದ ಪಶುಪಾಲನೆ ಮಾಡುವ ಅಲೆಮಾರಿ ಜನಾಂಗದವರಿರಬೇಕು. ಆದರೆ ಇವರು ಯಾವುದೊ ಕುಮಾರ್ಗದಿಂದ ಗಡಿಯನ್ನು ದಾಟಿ, ನೇರವಾಗಿ ರಾಜಧಾನಿಯನ್ನು ಪ್ರವೇಶಿಸಿದ್ದಾರೆ. ಇದಾವುದೂ ನಮಗೆ ಏನೆಂದು ಅರ್ಥವಾಗುವುದಿಲ್ಲ. ಹೇಗಾದರೂ ಇರಲಿ, ಇವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ.

ಇವರು ಯಾವಾಗಲೂ ನೀಲಾಕಾಶದ ಕೆಳಗೆ ಡೇರೆ ಹಾಕಿಕೊಂಡೇ ಮಲಗುತ್ತಾರೆ. ಏಕೆಂದರೆ ಇವರು ಮನೆಯನ್ನೂ ದ್ವೇಷಿಸುತ್ತಾರೆ. ಇವರಿಗೆ ಇರುವುದು ಒಂದೇ ಧಂದೆ. ಖಡ್ಗವನ್ನು ಸಾಣೆ ಹಿಡಿಯುವುದು, ಬಾಣವನ್ನು ಮಾಡುವುದು, ಕುದುರೆ ಸವಾರಿಯನ್ನು ಅಭ್ಯಸಿಸುವುದು–ಸದಾ ಈ ಕೆಲಸಗಳಲ್ಲೇ ಇವರು ನಿರತರಾಗಿರುತ್ತಾರೆ. ಹೀಗಾಗಿ ಒಂದು ಕಾಲದಲ್ಲಿ ಶುಚಿಗೆ, ಸುಖಕ್ಕೆ, ಶಾಂತಿಗೆ ಹೆಸರಾಗಿದ್ದ ಈ ಚೌಕ ಈಗ ಕುದುರೆ ಲಾಯವಾಗಿದೆ. ಈ ಚೌಕವನ್ನು ಶುಚಿಯಾಗಿ ಇಡಲು ರಭಾಡ

ಮಾಲಿಗಳೂ ಇಲ್ಲ. ಕೆಲವು ಸಲ ಅಂಗಡಿಯ ಮಾಲೀಕರೇ ಓಡಿ ಹೋಗಿ ಅಲ್ಲಿ ಬಿದ್ದಿರುವ ಕಸವನ್ನು ಎತ್ತಿ ದೂರ ಬಿಸಾಡಬೇಕಾಗುತ್ತದೆ. ಅದರ ಕೆಲವು ವೇಳೆ ಇದೂ ಸಾಧ್ಯವಿಲ್ಲ. ಎಲ್ಲಿ ಆ ಕ್ರೂರ ಕುದುರೆಗಳ ಗೊರಸಿನ ಕೆಳಗೆ ಬಿದ್ದು ಸಾಯಬೇಕಾಗುತ್ತದೊ ಇಲ್ಲವೇ ಆ ಕ್ರೂರ ಸೈನಿಕರ ಚಾವಟಿಯ ಹೊಡೆತದಿಂದ ಮೈ ಮುರಿಸಿಕೊಳ್ಳಬೇಕಾಗುವುದೋ... ಇಂಥ ಅನುಭವಗಳಿಂದ ಎಷ್ಟೋ ಜನ ಬೆದರಿದ್ದಾರೆ.

ಈ ಅಶ್ವಾರೋಹಿಗಳೊಡನೆ ಯಾರೂ ಮಾತನಾಡಿ ಜಯಿಸಲು ಸಾಧ್ಯವಿಲ್ಲ. ಏಕೆಂದರೆ ಅವರಿಗೆ ನಮ್ಮ ಭಾಷೆ ಅರ್ಥವಾಗುವುದೇ ಇಲ್ಲ. ಅವರದೇ ಆದ ಭಾಷೆಯೂ ಇಲ್ಲ. ಬಳ್ಳಿ ರಣಹದ್ದುಗಳು ಕೂಗುವಂತೆ ಅವರಲ್ಲಿ ಮಾತುಕತೆ ನಡೆಯುತ್ತಿರುತ್ತದೆ. ಕಿರ್ರೆಂದು ಕಿರಿಚುವ ಶಬ್ದವು ನಮ್ಮ ಕಿವಿಗೆ ಬೀಳುತ್ತಿರುತ್ತದೆ. ನಮ್ಮ ಭಾಷೆ. ಸಂಸ್ಕೃತಿ, ನಾಗರಿಕತೆ ಇವರಿಗೆ ಅರ್ಥವಾಗುವುದೇ ಇಲ್ಲ. ಅರ್ಥಮಾಡಿಕೊಳ್ಳುವ ಪ್ರಯತ್ನವನ್ನೂ ಮಾಡುವುದಿಲ್ಲ. ಎಷ್ಟೋ ಸಲ ಸುಲಭವಾದ ಸನ್ನೆಗಳನ್ನು ಮಾಡಿದರೂ ಅದನ್ನೂ ಅರ್ಥಮಾಡಿಕೊಳ್ಳುವ ಸೈರಣೆ ಇಲ್ಲ. ಸಂಜ್ಞೆ ಮಾಡಿ ನಮ್ಮ ಮುಖ ಹಾಗೂ ಕೈಗಳು ದಣಿದುಹೋಗಿವೆ ! ಇದನ್ನೆಲ್ಲಾ ವೀಕ್ಷಿಸಿದಾಗ ಅವರ ಮುಖ ಕಠೋರವಾಗುತ್ತದೆ. ಗಿರ್ರನೆ ಕಣ್ಣು ಗುಡ್ಡೆಯು ತಿರುಗಿ ತಕ್ಷಣ ಬಾಯಲ್ಲಿ ನೊರೆ ತುಂಬುತ್ತದೆ. ಅವರು ಯಾವ ದುರುದ್ದೇಶವನ್ನೂ ಇಟ್ಟುಕೊಂಡು ಈ ರೀತಿ ಮಾಡುವುದಿಲ್ಲ. ಇನ್ನೊಬ್ಬರ ಮೇಲೆ ಧಾಳಿ ಮಾಡಿ ಜಯಿಸಬೇಕೆಂಬ ಆಸೆಯೂ ಇಲ್ಲ. ಅವರ ಸ್ವಭಾವವೇ ವಿಚಿತ್ರ. ಅವರಿಗಿಷ್ಟವಾದುದನ್ನು ನಿಮಿಷಾರ್ಧದಲ್ಲಿ ಪಡೆಯುತ್ತಾರೆ.



ಅವರು ಈ ವಿಷಯದಲ್ಲಿ ಬಲವನ್ನೂ ಉಪಯೋಗಿಸುವುದಿಲ್ಲ. ತಮ್ಮ ಉದ್ದವಾದ ಕೈಯನ್ನು ಪದಾರ್ಥದೆಡೆಗೆ ಚಾಚಿದರೆ ಸಾಕು, ಅಲ್ಲಿ ನೆರೆದಿದ್ದವರೆಲ್ಲ ಪಕ್ಕಕ್ಕೆ ಸರಿಯುತ್ತಾರೆ.

ನನ್ನ ಅಂಗಡಿಯಿಂದಲೂ ಸಾಕಷ್ಟು ಸಾಮಾನುಗಳನ್ನು ಲಪಟಾಯಿಸಿದ್ದಾರೆ. ಆದರೂ ನಾನು ಯಾರಿಗೂ ದೂರನ್ನು ಕೊಡುವಹಾಗಿಲ್ಲ. ಪಕ್ಕದಲ್ಲಿರುವ ಕಟುಕನೂ ಪಡಬಾರದ ಹಿಂಸೆಯನ್ನು ಪಡುತ್ತಿದ್ದಾನೆ. ಇವನು ಮಾರಾಟಕ್ಕೆ ಯಾವ ಮಾಂಸವನ್ನು ತಂದರೂ, ಇವರು ಅವನಿಂದ ಕಿತ್ತುಕೊಂಡು ತಿಂದು ತೇಗುತ್ತಾರೆ. ಆಶ್ಚರ್ಯವೆಂದರೆ ಅವರ ಕುದುರೆಗಳೂ ಮಾಂಸಾಹಾರಿಗಳು! ಪಕ್ಕದಲ್ಲಿ ಒಂದು ಕುದುರೆ ನಿಂತಿದ್ದರೆ ಮತ್ತೊಂದು ಕುದುರೆ ಅದರ ಮಾಂಸ ಖಂಡಕ್ಕೇ ಬಾಯಿ ಹಾಕುತ್ತದೆ. ಇಷ್ಟೆಲ್ಲಾ ಆಘಾತವಾಗಿದ್ದರೂ ಕಟುಕ ವ್ಯಾಪಾರವನ್ನೇನೂ ನಿಲ್ಲಿಸಿಲ್ಲ. ಕಟುಕನನ್ನು ಹೆದರಿಸಿ ಈ ಜನ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದಾರೆ. ಈ ಜನರಿಗೆ ಒಂದು ದಿನ ಮಾಂಸ ಸಿಗದೇ ಇದ್ದರೆ ಯಾವ ಕೆಲಸವನ್ನೂ ಮಾಡಲು ಹೇಸುವುದಿಲ್ಲ.

ಇದಕ್ಕಂತೆ ಈ ಕಟುಕನಿಗೆ ಒಂದು ಹೊಸ ಉಪಾಯ ಹೊಳೆಯಿತು. ಸುಮ್ಮನೆ ನನಗೇಕೆ ತೊಂದರೆ ಎಂದು ಒಂದು ದಿನ ಎತ್ತನ್ನೇ ಹೊಡೆದುಕೊಂಡು ಬಂದ. ನಾನು ಆ ದಿನ ಅಂಗಡಿಯಲ್ಲೇ ಇದ್ದೆ. ತುಂಬಾ ಚಳಿ ಇದ್ದುದರಿಂದ ಮುಖಕ್ಕೆ ದಪ್ಪವಾದ ಮಫ್ಲರ್ ಹಾಗೂ ಇಡೀ ಮೈ ಆವರಿಸುವಂತೆ ಕಂಬಳಿ ಹೊದ್ದುಕೊಂಡು ಪೆಟ್ಟಿಗೆ ಕುಳಿತಿದ್ದೆ. ರಸ್ತೆಯ ಆಕ್ರಂದನ, ವಿಚಿತ್ರ ಶಬ್ದಗಳು ಕಿವಿಗೆ ಬೀಳದಿರಲಿ ಎಂದೇ ನನ್ನ ಉದ್ದೇಶ. ಕಟುಕ ಎತ್ತನ್ನು ಹೊಡೆದುಕೊಂಡು ಬಂದ ತಕ್ಷಣವೇ ಎತ್ತು ವಿಕಾರವಾಗಿ ಕೂಗಲು ಆರಂಭಿಸಿತು. ಈ ಜನಗಳೆಲ್ಲಾ ಬಿಸಿಯಾದ ರಕ್ತ ಮಾಂಸವನ್ನು ಹೀರುವುದಕ್ಕೆ ಎಲ್ಲ ಭಾಗಗಳಿಂದ ಬಂದರು. ತಮ್ಮ ಕೋರೆ ಹಲ್ಲುಗಳನ್ನು ಪ್ರಯೋಗಿಸಿ ಶಕ್ತ್ಯಾನುಸಾರ ತೃಪ್ತಿ ಹೊಂದಿದರು. ಈ ಆಕ್ರಂದನವನ್ನು ಕೇಳಲಾರದೆ ಕುಳಿತಲ್ಲಿಂದಲೇ ದೃಷ್ಟಿ ಹಾಯಿಸಿದೆ. ಎಲ್ಲಾ ಭಾಗಗಳಿಂದಲೂ ರಕ್ತ ಒಸರುತ್ತಿದೆ. ಈ ಅನುಭವವಾದ ಮೇಲೆ ಕಟುಕನು ಜೀವಂತವಾದ ಎತ್ತನ್ನು ಅಂಗಡಿಗೆ ತರಲಾರ. ಕುಡುಕರು ಹೇಗೆ ಮದ್ಯ ತುಂಬಿರುವ ಸೀಸೆಗಾಗಿ ಹೊಡೆದಾಡುತ್ತಾರೊ ಹಾಗೆ ಅಳಿದುಳಿದ ಮಾಂಸದ ತುಣುಕಿಗಾಗಿ ಈ ಜನ ಹೋರಾಡುತ್ತಿದ್ದಾರೆ.

ಹೊರ ಬಂದು ಎಲ್ಲಾ ಕಡೆ ನೋಡಿದೆ. ರಾಜ ಅರಮನೆಯ ಹೊರ ಭಾಗದ ಕಿಟಕಿಯ ಹತ್ತಿರ ನಿಂತಿದ್ದಾನೆ. ಸಾಧಾರಣವಾಗಿ ಅತ ಅರಮನೆಯ ಹಿಂಭಾಗದ ತೋಟದಲ್ಲಿರುವುದೇ ಹೆಚ್ಚು. ಆದರೆ ಈ ದಿನ ಅವನು ಕಿಟಕಿಯಲ್ಲಿ ನಿಂತಿದ್ದಾನೋ ಅಥವಾ ನನಗೇ ಹಾಗೆ ಅನ್ನಿಸಿತೊ ಗೊತ್ತಿಲ್ಲ. ರಾಜ ತಲೆ ತಗ್ಗಿಸಿ ಮುಂದೆ ನಡೆಯುತ್ತಿರುವ ದೃಶ್ಯಗಳನ್ನು ಗಮನಿಸುತ್ತಿದ್ದಾನೆ.

'ಈಗ ನಡೆದದ್ದನ್ನು ನೋಡಿದ್ದಾಯಿತು. ಮುಂದೆ ಏನು ನಡೆಯುವುದೋ?' ಎಂದು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾಗಿದೆ. ಎಷ್ಟು ದಿವಸ ನಾವು ಈ ಹೊರೆ, ಸಂಕಟ, ದುಃಖ, ನೋವನ್ನು ಅನುಭವಿಸಲು ಸಾಧ್ಯ? ಇದಕ್ಕೆ ಕೊನೆಯೇ ಇಲ್ಲವೇ? ಈ ನಮ್ಮ ರಾಜ ಗೊತ್ತು ಗುರಿ ಇಲ್ಲದೆ ಅಂಡಲೆಯುವ ಈ ಸೈನಿಕರನ್ನು ಹೇಗೆ ಅರಮನೆಯಲ್ಲಿ ಸೇರಿಸಿಕೊಂಡನೋ? ಅವರನ್ನು ಹೊರಕ್ಕೆ ನೂಕುವ ತಾಕತ್ತು ನಮ್ಮ ರಾಜನಿಗಿಲ್ಲವೋ? ಅರಮನೆಯ ಬಾಗಿಲು ಮುಚ್ಚೇ ಇದೆ. ಅಲ್ಲಲ್ಲಿ ಪಹರೆಯವರು ಗಸ್ತು ಹಾಕುತ್ತಿದ್ದಾರೆ, ಅಷ್ಟೆ.

ಇನ್ನು ನಾವು ಎಚ್ಚರಗೊಳ್ಳಬೇಕು. ಕುಶಲ ಕರ್ಮಿಗಳು, ವ್ಯಾಪಾರಸ್ಥರೇ ನಮ್ಮ ರಾಜ್ಯವನ್ನುಳಿಸಬೇಕು. ಆದರೆ ಈ ಮಹತ್ತರವಾದ ಕೆಲಸ ನಮ್ಮಿಂದ ಸಾಧ್ಯವೇ? ಈ ಚೈತನ್ಯ ನಮ್ಮಲ್ಲಿದೆ ಎಂದು ನಾವೇನೂ ಹೇಳಿಕೊಂಡಿಲ್ಲ. ದೊಡ್ಡ ಅನರ್ಥವಾಗಿದೆ. ನಮ್ಮ ಸರ್ವಸ್ವವೂ ನಾಶವಾಗುವ ಹೊತ್ತು ಬಂದಿದೆ. ✡





# ಮೃತ್ಯು ಮತ್ತು ಮಹಾಕವಿ ರವೀಂದ್ರರು



ಗೌರೀಶ ಕಾಯ್ಕಿಣಿ

ಗುರುದೇವ ರವೀಂದ್ರನಾಥ ಠಾಕೂರರು ೧೯೪೧ರ ಜುಲೈ ತಿಂಗಳ ೩೦ನೆಯ ದಿನ ಮುಂಜಾನೆ ಎಂಟು ಗಂಟೆಗೆ ಕಾಲವಶರಾದರು. ಆ ಮುಂಜಾನೆ ಆ ಮಹಾಕವಿ ತನ್ನ ಕೊನೆಯ ಕವನವನ್ನು ಬರೆದರು. ಬರೆದು ಮುಗಿದ ಎರಡು ತಾಸುಗಳ ನಂತರ ನಂತರ ಅವರು ಒಮ್ಮೆ ಮೂರ್ಛೆ ಹೋದರು. ಆ ಅವಸ್ಥೆಯೊಳಗಿಂದಲೇ ರವೀಂದ್ರರು ಚಿರನಿದ್ರೆಯನ್ನು ಸೇರಿದರು.

'ತಾಯಿಯು ಒಂದು ಮೊಲೆಯನ್ನು ಬಿಟ್ಟು ಕೂಸು ಇನ್ನೊಂದು ಮೊಲೆಗೆ ಬಾಯಿ ಕೊಟ್ಟಂತೆ ಸಾವೆಂದರೆ' ಅಂದಿದ್ದರು ಗುರುದೇವರು ಒಂದು ಕವನದಲ್ಲಿ. ರವೀಂದ್ರನಾಥರು ತಮ್ಮ ಜೀವನದ ಪ್ರತಿಕ್ಷಣವನ್ನೂ ನೃತ್ಯ-ನಾಟ್ಯ-ಸಂಗೀತ ಹಾಗೂ ಚಿತ್ರಗಳ ಕಾವ್ಯ-ಕಲಾ ವೈಭವದಲ್ಲಿ ವರ್ಣರಂಜಿತವಾಗಿ ಕಳೆದರು. ಅದರೂ ಬಹುರೂಪಿಯಾದ ಸಾವಿನ ಸಂಗಡ ನಿಕಟವಾಗಿ, ಅಷ್ಟೇ ಉತ್ಕಟವಾಗಿ ಒಡನಾಡಿದರು, ಸೆಣಸಾಡಿದರು; ಆ ಕುರಿತು ತಮ್ಮ ಕಾವ್ಯದಲ್ಲಿ ಸರಸವಾಡಿದರು. "Death is abroad and children play" ಎಂದು ಸಾವಿನ ಭೀತಿಯನ್ನು ಗೆದ್ದು ಜಿದ್ದಿನಿಂದ ಬಾಳಬಯಲಾಟ ಕುಣಿದು ಮುಗಿಸುವ ಮಾನವನ ಅಮರ ಧೈರ್ಯವನ್ನು ಕೊಂಡಾಡಿದರು.

ರವೀಂದ್ರನಾಥರು ಸಾವನ್ನು ಜೀವದ ಗೆಳೆಯನಂತೆ ಕಂಡರು. ಒಬ್ಬ ವಿರಕ್ತ ಸಂನ್ಯಾಸಿಯಂತೆ ಅಥವಾ ಸಾಯಲು ಮುಗ್ಗುವ ರಣಕಣದ ಕಡುಗಲಿಯಂತೆ ಅವರು ಸಾವಿಗೆ ಮುಖಾಮುಖಿಯಾಗಲಿಲ್ಲ. ಎರಡೂ ಕೈ ಚಾಚಿ ತಾಯಿಯ ತೆಕ್ಕೆಗೆ ಓಡುವ ಬಾಲಕನಂತೆ ಅವರು ಸಾವಿನತ್ತ ಓಡಿದರು. ಸಾವಿಗಾಗಿ ಅಭಿಸಾರಿಕೆಯಂತೆ ಪ್ರತೀಕ್ಷೆ ಮಾಡಿದರು. ವಾಕ್ಯಕ್ಕೆ ಒಂದು ಪೂರ್ಣವಿರಾಮ

ಇರಲೇಬೇಕು. ಹಾಗೆಯೇ ಬಾಳಿಗೆ ಸಾವು ಅವಶ್ಯ ಹಾಗೂ ಅಪ್ಯಾಯಮಾನ. ಅವರ "King of the dark chamber" ನಾಟಕದ ದೊರೆಯಂತೆ ಸಾವು ರುದ್ರವಾದಷ್ಟೇ ಭದ್ರಮುಖಿ.

ಸಾವನ್ನೂ ಬದುಕನ್ನೂ ದಿಟ್ಟಿಸುವ ಅವರ ದಿಟ್ಟ ದೃಷ್ಟಿ ಉದಾಸೀನ ವೃತ್ತಿಯುದಲ್ಲ, ನಿರ್ವಿಕಾರ ತಟಸ್ಥತೆಯುದೂ ಅಲ್ಲ. ಅದು ಒಂದು ನಾಟ್ಯವನ್ನೋ ನೃತ್ಯವನ್ನೋ ನೋಡಿ ನಲಿಯುವ ರಸಿಕನ ನಿರ್ಲಿಪ್ತತೆಯುದು. ಈ ದೃಷ್ಟಿ ಈ ವೃತ್ತಿ ಗುರುದೇವರ ಜೀವನಾನುಭವದಿಂದ ಪಳಗಿ ಬಂದದ್ದು.

ಠಾಕೂರರ ತಾಯಿ ಅವರ ಬಾಲ್ಯದಲ್ಲಿಯೇ ತೀರಿಕೊಂಡರು. ಅಂದಿನಿಂದಲೇ ಅವರು ಏಕಾಂತ ಸೇವಿಗಳೂ ಅಂತರ್ಮುಖಿ ಜೀವಿಗಳೂ ಆಗಿ ಬೆಳೆದರು. ಮುಂದೆ ಮದುವೆಯಾದ ಮೇಲೆ ಅವರ ಕೈ ಹಿಡಿದ ಮೆಚ್ಚಿನ ಮಡದಿಯೂ ಅವರನ್ನು ಬಾಳ ಬಟ್ಟೆಯಲ್ಲಿ ನಡುವೆಯೇ ಬಿಟ್ಟು ಹೊರಟಿದ್ದು ಹೋದಳು. ಅದರೂ, ಮೊದಲು ಅವರನ್ನು ಬಹುವಾಗಿ ಹಚ್ಚಿ ನೆಚ್ಚಿಕೊಂಡಿದ್ದ ಅತ್ತಿಗೆಯೂ ಆತ್ಮಹತ್ಯೆ ಮಾಡಿಕೊಂಡಳು. ಪತ್ನಿವಿಯೋಗದ ಕೆಲವೆ ದಿನಗಳ ನಂತರ ಅವರ ಕಿರಿಯ ಮಗ ಹಾಗೂ ಮದುವೆಯಾದ ಇಬ್ಬರು ಹೆಣ್ಣು ಮಕ್ಕಳು ನಿಧನಹೊಂದಿದರು.

ಆಷಾಢ ಮಾಸದ ಭಾರೀ ಮಳೆಯಲ್ಲಿ ಮನೆಯೇ ಕುಸಿದಂತೆ ಆಯಿತು ಈ ಕೋಮಲ ಕವಿ–ಜೀವಿಗೆ. ಆಗ ಒಂದು ಕ್ಷಣಕಾಲ ಅವರು ಈ ಪ್ರಪಂಚದಿಂದಲೇ ಮನಸಾ ಸಿಡಿದು ದೂರ ಸರಿದರು. ಆದರೆ ಅದು ಕ್ಷಣಕಾಲವೇ. ತಂದೆಯ ದಾರ್ಶನಿಕತೆಯ ಕಮಲಗರ್ಭದಲ್ಲಿ, ಮನೆತನದ ಕಲಾತ್ಮಕ ಸಂಸ್ಕೃತಿಯ ಕವಚಕೋಶದಲ್ಲಿ ಉಸಿರಾಡಿಸುವ ಈ ಭಾವಭೃಂಗ ತನ್ನ ಸಮತೋಲ ಸಾವರಿಸಿಕೊಂಡಿತು. ಮುಂದೆ ಎಷ್ಟೇ ದುಃಖಗಳ ಆಘಾತ ಆವೇಶಗಳು ಬಂದರೂ ರವೀಂದ್ರರು ಅವನ್ನೆಲ್ಲ ಒಳಗಿಂದೊಳಗೇ ನುಂಗಿ ಅರಗಿಸಿಕೊಂಡರು. ಲೋಕಕ್ಕೆ ಅವರ ಪ್ರಸನ್ನ ಗಂಭೀರ ಸ್ವರೂಪವೊಂದೇ ನಡೆನುಡಿಯಲ್ಲಿ ಮಂದಿಯ ಕಣ್ಣಿಗೆ ಬೀಳುತ್ತಿತ್ತು.

ತಮ್ಮ ಮುದ್ದು ಮಗಳ ಮರಣಾನಂತರ ರವೀಂದ್ರರು ಅವಳ ಕೋಣೆಯಿಂದ ಸದ್ದಿಲ್ಲದ ಹೆಜ್ಜೆಗಳಿಂದ ಹೊರಬಂದರು. ಹೊರಗೆ ಸಾಂತ್ವನೆಗಾಗಿ ಆಪ್ತೇಷ್ಟರು ನೆರೆದಿದ್ದರು. ಅವರಿಗೆ ರವೀಂದ್ರರು ಶಾಂತಭಾವದಲ್ಲಿ ಅಂದರು, "ಬೇಲಾ ಇನ್ನು ನಮ್ಮನ್ನು ಶಾಶ್ವತವಾಗಿ ಅಗಲಿ ಹೋದಳು" ಮತ್ತು ಅವರು ಒಂದು ತಾಸಿನೊಳಗೆ ತಮ್ಮನ್ನು ಪೂರ್ತಿ ಸಾವರಿಸಿಕೊಂಡು ಮೊದಲೇ ಗೊತ್ತುಪಡಿಸಿದ ಒಂದು ಸಭೆಯಲ್ಲಿ ಭಾಷಣಕ್ಕೆ ಹೋಗಿ ನಿಂತರು. ಪೂರ್ವನಿಯೋಜಿತವಾದ ಸಾರ್ವಜನಿಕ ಕಾರ್ಯಕ್ರಮವನ್ನು ಅವರು ತಮ್ಮ ಮಗಳ ಸಾವಿನ ಒಂದು ಖಾಸಗಿ ದುಃಖಕ್ಕಾಗಿ ರದ್ದುಗೊಳಿಸಲು ಕೊಡಲಿಲ್ಲ.

ಹೀಗೆ ಐಹಿಕ ಜೀವನದಲ್ಲಿ ದುಃಖಗಳ ಸುರಿಮಳೆ ಹೊಯ್ಯುತ್ತಿರುವಾಗಲೇ ಅದರಲ್ಲಿ ನಿಂತು ಮಿಂದು ಮುಕ್ತವಾಗುತ್ತಾ ರವೀಂದ್ರರು ಲೋಕಕ್ಕೆ ಆನಂದಮಯ ಕವನಗಳಲ್ಲಿ ಬಾಳಿನ ಮಾಂಗಲ್ಯವನ್ನೂ ಸೌಂದರ್ಯವನ್ನೂ ಮಿಡಿದು ಮೂಡಿಸಿ ನೀಡುತ್ತಿದ್ದರು. – "ಬೇವಿನ ಕಹಿ ಬಾಳಿನಲ್ಲಿ ಹೂವಿನ ನರುಗಂಪು ಸೂಸಿ ಜೀವ ಕಳೆಯ ತರುವ" ಯುಗಾದಿಯಂತೆ.

ಗುರುದೇವರ ಏಕಮಾತ್ರ ಮೊಮ್ಮಗ ಜರ್ಮನಿಯಲ್ಲಿ ನಿಧನ ಹೊಂದಿದನು. ಆಗ ಅವರು ಶೋಕದಲ್ಲಿ ಸುಟ್ಟು ಸುಣ್ಣವಾಗಲಿಲ್ಲ. ತಮ್ಮ ದುರ್ಧರ ದುಃಖದ ತಿಲಮಾತ್ರವನ್ನೂ ಅವರು ಹೊರಗೆ ಕಾಣಗೊಡಲಿಲ್ಲ. ಅಂಥ ದುಃಖ ನೀಲಬಾನಿನಲ್ಲಿ ತೇಲಿ ಇಳಿಯುವ ಬಣ್ಣದ ಗರಿಯಂತೆ ಆ ಮಹಾಕವಿಯ ಎದೆಯಾಳವನ್ನು ಸೇರಿತು. ತೀವ್ರ ಏಕಾಂತಿಕ ಶೋಕವು ರಿಸ್ಟ್ ವಾಚಿನಂತೆ ಕೈ ಮೇಲೆ ಕಟ್ಟಿಕೊಂಡು ಮೆರೆಯಿಸುವದಲ್ಲ. ಅದು ಬಹಿರಂಗಗೊಳಿಸಿದಷ್ಟೂ ಪವಿತ್ರ ಗಂಭೀರ ಹಾಗೂ ಆತ್ಮೀಯ. ಅಂದು ಅವರು ಬರೆದರು:

"When I shall forget to nurse this sorrow as my own, it will get diffused in the whole world. O ye, greif stricken, at long last the bubble of grief will merge in the ocean of painlessness."

ತಮ್ಮ ಹೆಂಡತಿಯ ಸೋದರಿಯ ಸಾವಿನ

ನಂತರ ರವೀಂದ್ರರು ಮತ್ತೆ ತುಸು ವಿಷಣ್ಣರೂ ಅಸ್ವಸ್ಥರೂ ಆದರು. ಆದರೆ ಅವರು ಎಂದಿಗೂ ಉದಾಸೀನರಾಗಲಿಲ್ಲ. ಬಾಳಿಗೆ ವಿಮುಖರಾಗಲಿಲ್ಲ. ಭಾವದಲ್ಲಿ ವಿರಾಗಿಯಾಗಲಿಲ್ಲ. ತಮ್ಮ ಹೆಂಡತಿಯ ಕುರಿತು ಅವಳ ಈ ಸೋದರಿಯ ಕುರಿತು ಅವರು ಕವನಗಳನ್ನು ರಚಿಸಿದ್ದಾರೆ. ಆ ಕವನಗಳಲ್ಲಿ ವಿರಹದ ದುರ್ಬಲ ದುಃಖ ಒಡಮೂಡಿಲ್ಲ. ಅಲ್ಲಿರುವುದು ಕೇವಲ ಶ್ರದ್ಧಾಮಯವಾದ ಸಜೀವ ಸ್ಮೃತಿ.

ಸತ್ತವರ ಸ್ಮಾರಕ ಕಟ್ಟುವದು ಮನಸ್ಸಿನ ಒಂದು ದೌರ್ಬಲ್ಯದ ಲಕ್ಷಣ. ಅಂಥ ಆಲಂಬನ ತನ್ನ ಅಹಂಕಾರದ ತೃಪ್ತಿಗಾಗಿ. ಪ್ರಿಯ ಜನರ ನೆನಪು ಹಸಿರಾಗಿ ಇಡಲು ಈ ಹೊರಗಿಸ ನೆನಪುಗಳೇಕೆ? "ಸ್ಮಾರಕ" ಅಂದರೆ ನೆನಪಿಸಿಕೊಡುವ ಒಂದು ನಿಮಿತ್ತ. ಈ ಸಂದರ್ಭದಲ್ಲಿ ಅವರು ತಾಜಮಹಲಿನ ಉಲ್ಲೇಖ ಮಾಡುವದುಂಟು. ಶಾಹಜಹಾನ್ ತನ್ನ ಪ್ರಿಯತಮೆ ಮುಮತಾಜಳನ್ನು ತಾಜಮಹಲಿನ ಅಮೃತಶಿಲೆಯ 'ಕಬ್ರಿ'ನಲ್ಲಿ 'ದಫನ' ಮಾಡಿ ಅವಳ ಸುಮಧುರ ಸ್ಮೃತಿಯನ್ನು ತನ್ನ ಮನಸ್ಸಿನ ಪಂಜರದೊಳಗಿಂದ ಕಾಯಂ ಹಾರಿಸಿ ಹೊರಗಟ್ಟಿಬಿಟ್ಟ! ಎನ್ನುತ್ತಿದ್ದರು. ರವೀಂದ್ರನಾಥರು (ಆದರೂ ತಾಜಮಹಲಿನ ಈ ಹಾಲುಗಲ್ಲಿನ ಅಪ್ರತಿಮ ಸೌಂದರ್ಯದ ಮಂದಿರವನ್ನು ಅವರು "a cleardrop on the cheese of time" ಎಂದು ಅಷ್ಟೇ ಅಪ್ರತಿಮ ರೂಪಕದಲ್ಲಿ ಬಣ್ಣಿಸಿದ್ದಾರೆ!)

ಮಡದಿಯ ಹಾಗೂ ಅವಳ ಸೋದರಿಯ ಸಾವಿನ ನಂತರ ಕೆಲಕಾಲ ಅವರು ವಿಕ್ಷಿಪ್ತರಾದರು, ವಿರಕ್ತರಾದರು. ಚಿಕ್ಕ ಪುಟ್ಟ ಮಾತಿಗೂ ಸಿಡಿದೇಳುತ್ತಿದ್ದರು. ಆಗ ಅವರ ಬಗಗೆ ಒಬ್ಬ ಟೀಕಾಕಾರನು ವಿನೋದವಾಗಿ ಅಂದದ್ದುಂಟು. 'ಠಾಕೂರರ ಗೀತಾಂಜಲಿಯನ್ನು ಮನೆಯಲ್ಲಿ ಇಟ್ಟುಕೊಳ್ಳಬೇಕು ಮತ್ತು ಠಾಕೂರರನ್ನು ಹಿಮಾಲಯಕ್ಕೆ ಒಯ್ದು ಬಿಡಬೇಕು?' ಟಾಗೋರರಿಗೂ ಹಾಗೆಯೇ ಅನಿಸಿರಬಹುದು.

ಏಕೆಂದರೆ ಈ ಸುಮಾರಿಗೆ ಅವರು ಪದ್ಮಾ ಹೊಳೆಯ ನಡುವೆ ನಿರ್ಜನ ನೀರಾಳದ ತಾಣದಲ್ಲಿ ಕೆಲವು ಕಾಲ ಒಂಟಿಯಾಗಿ ಪೂರ್ತಿ ಮೌನದಲ್ಲಿ



ಮಾಡಿಸುತ್ತಿದ್ದರು. ಅವರ ಆರೈಕೆಗೆ ಇರುವ ಒಬ್ಬ ಆಳು ಕೂಡ ಸದ್ದಿಲ್ಲದೆ ಬಿಕ್ಕುತ್ತ ನರಳು ಕೊಳ್ಳುತ್ತಿದ್ದ. ಅವರ ಕಣ್ಣಿಗೂ ಬೀಳುತ್ತಿರಲಿಲ್ಲ. ಆದರೆ ಮುಂದೆ ಮೌನ ಮುರಿದು ಅವರು ಮಾತಿಗೆ ಮರಳಿದಾಗ ಕೆಲ ಹೊತ್ತು, ಅವರಿಗೆ ಮಾತೇ ಬರಲಿಲ್ಲ. ಇರಲಿ ಆ ಕಥಾ ಪ್ರಸಂಗ ಬೇರೆ.

ಹೀಗೆ ಹಲವು ಹಂತಗಳಲ್ಲಿ, ಹಲವು ಮುಖ ಗಳಲ್ಲಿ ಸಾವಿನ ನೋವನ್ನೂ ಕಾವನ್ನೂ ಭಾವ ಸಂಸ್ಕಾರವನ್ನೂ ಚೆನ್ನಾಗಿ ಅರಿತ ರವೀಂದ್ರರಿಗೆ ಸಾವು ಸ್ವತಃ ಅಸ್ತಿತ್ವವಿಲ್ಲದ ಒಂದು ಜೀವನ ಛಾಯೆ. ಸದಾಕಾಲ ಜವಳಿ ಮಕ್ಕಳಂತೆ ಬಾಳು–ಸಾವು ಒಂದನ್ನೊಂದು ಅಂಟಿಯೇ ಇರುವ ಯಮಳಯುತಿ. ಮನುಷ್ಯ ಸಾವಿಗೆ ಆತ್ಮ–ನಾಶಕ್ಕೆ ಹೆದರುವಷ್ಟು ದೇವರಿಗೂ ಹೆದರುವದಿಲ್ಲ. ಆದರೆ ಇದು ಅವನ ಮೂರ್ಖತನ–ಎಂದು ಈ ಮಹಾಕವಿಯು ಭಾವಿಸಿದ್ದರು. ಗಿಡ–ಮರ–ಹೂ–ಹಣ್ಣು ಚಿಗುರು ಸೃಷ್ಟಿ, ಇವುಗಳಿಗೆ ಸಾವಿನ ಬಗೆಗೆ ಯೋಚನೆಯಿಲ್ಲ. ಭೀತಿಯಿಲ್ಲ. ನಾವೇ ಏಕೆ ಕಂಗೆಡಬೇಕು? ಹುಟ್ಟು ಸಾವು ಸೃಷ್ಟಿಯಲ್ಲಿ ನಿಲ್ಲದೆ ಸದಾ ನಡೆಯುವ ಕ್ರಿಯೆ. ತನ್ನ ಆರಂಭ ತನಗೆ ಅರಿವಾಗದೆ ಒದಗಿ ಬಂತು. ತನ್ನ ಕೊನೆಯೂ ಹಾಗೆಯೇ ಅರಿವಿಲ್ಲದೆ ಒದಗಿ ಬರಲಿ–'ಅನಾಯಾಸೇನ ಮರಣಂ' ಇದು ಗುರುದೇವರ ಹಂಬಲವಾಗಿತ್ತು. ಅಳುಕು ಅಂಜಿಕೆ ಇಲ್ಲದೆ. ಅವರು ತನ್ನ ಅಂತ್ಯವನ್ನು ಇದಿರು ನೋಡುತ್ತಿದ್ದರು, ನೂತನ ಗೆಳೆಯನ ಪುನರ್ಮಿಲನದಂತೆ.

ಮತ್ತು ಅವರ ಅಂತ್ಯವೂ ಅವರ ಹಾರೈಕೆಯಂತೆಯೇ ನಿದಾನವಾಗಿ ಒದಗಿ ಬಂತು. ನಿಧನ ಹೊಂದುವ ಎರಡು ಗಂಟೆ ಮುಂಚೆ ಅವರು ಬರೆದುಮುಗಿಸಿದ ಈ ಕವನದಲ್ಲಿ ಸಾವಿಗಾಗಿ ಅವರ ಈ ಪ್ರತೀಕ್ಷೆಯ ಛಾಯಾಚಿತ್ರ ಸ್ಪಷ್ಟ ವಾಗಿ ಮೂಡಿಬಂದಿದೆ :

"You have riddled the path of your creation
With strange nets of deceit
Deceitful one,
Snares of false beliefs you have skilfully laid
In our simple lives
With such delusions you have marked the great,
For him you have not kept the secret night
Your stars
Light his way towards his inner self,
A path for ever clear by his simple faith
Made radient all the way,
Apparently tortous, he is actually simple
And this is his pride.
Others think he is deluding himself.
But he finds truth
Bathed in the inner light within himself
Nothing can deceive him
His last reward he carries to his coffer
He who can effortlessly bear your guiles
Receive at your hands
His imperishable right to peace."

ಮೃತ್ಯುವಿನ ಎಲ್ಲ ಮೋಸಗಳನ್ನೂ ಈ ಮೋಹದ ಬಲೆಯ ಬೀಸುಗಳನ್ನೂ ಅನುಮಾನ ವಿಲ್ಲದೆ ತಾಳಿ ತಿಳಿದುಕೊಂಡ ರವೀಂದ್ರನಾಥರು ಅವರ ಈ ಕವನದ ನಾಯಕನಂತೆ ಶಾಶ್ವತ ಶಾಂತಿಯ ಅಕ್ಷಯ್ಯ ಅಧಿಕಾರವನ್ನು ಗಳಿಸಿದರು.

**ಇದು ನಮ್ಮ ಬೆಳ್ಳಿ ಹಬ್ಬದ ವಿಶೇಷ ಸಂಚಿಕೆಗಾಗಿ ಆಮಂತ್ರಿತ ಲೇಖನ**



## ಇದು ಮಾನಸಿಕ ಅಸ್ವಾಸ್ಥ್ಯದ ಕುರುಹೂ ಆಗಿರಬಹುದು

# ಮಡಿ

ಡಾ. ಕೆ. ಎಂ. ಧ್ರುವಕುಮಾರ

ಮಡಿಯ ಆಚರಣೆ ನಮ್ಮಲ್ಲಿ ಬಹಳವಾಗಿದೆ. ಈಗಿನ ಜನಾಂಗದಲ್ಲಿ ಇದು ಬಹಳಷ್ಟು ಕಡಿಮೆಯಾಗಿದ್ದರೂ ಇನ್ನೂ ಪೂರ್ತಿಯಾಗಿ ಹೋಗಿಲ್ಲ. ಮಡಿಯ ಆಚರಣೆ ಮಾಡುವವರನ್ನು ಕಾಣದಿರುವವರು ಬಹುಶಃ ಇಲ್ಲವೆಂದೇ ಹೇಳಬೇಕು. ಮಡಿಯ ಆಚರಣೆಯಲ್ಲಿ ಒಬ್ಬರಿಂದ ಇನ್ನೊಬ್ಬರಿಗೆ ವ್ಯತ್ಯಾಸಗಳನ್ನು ಕಾಣಬಹುದು. ಕೆಲವರು ಮುಂಜಾನೆ ಎದ್ದು ಸ್ನಾನಮಾಡಿ, ಒದ್ದೆ ಬಟ್ಟೆಯಲ್ಲೇ ದೇವರ ಪೂಜೆ ಮಾಡಬೇಕು ಮತ್ತು ಮಡಿಯಲ್ಲೇ ಅಡುಗೆಯನ್ನು ಸಹ ಮಾಡಬೇಕು. ಮನೆಯವರಾದಾಗ್ಯೂ ಅಡಿಗೆಯ ಪದಾರ್ಥಗಳನ್ನು ಮುಟ್ಟಗೊಡಿಸುವುದಿಲ್ಲ. ಸಾರಿನ ಪಾತ್ರೆ ಮುಟ್ಟಿದ ಕೈಯಲ್ಲೆ ಮೊಸರಿನ

ದೆನ್ನುವರು. ಇನ್ನು ಕೆಲವರು ವಿಶೇಷ ದಿನಗಳಲ್ಲಿ ಮಾತ್ರ ಮಡಿಯನ್ನು ಅನುಸರಿಸುವರು. ಕೆಲವರಿಗೆ ಹರಿಜನರನ್ನು ನೋಡಿದರೆ ಮೈಲಿಗೆಯಾದರೆ ಇನ್ನು ಕೆಲವರಿಗೆ ವಿಧವೆಯನ್ನು ನೋಡಿದರೆ ಮೈಲಿಗೆಯಾಗುವುದು.

ಕೆಲವು ಮಡಿಯ ಆಚರಣೆಗಳು ಆರೋಗ್ಯ ದೃಷ್ಟಿಯಿಂದ ಒಳಿತಾದರೆ ಇನ್ನು ಕೆಲವು ಆಚರಣೆಗಳಲ್ಲಿ ಹುರುಳಿಲ್ಲ. ಸ್ನಾನ ಮಾಡುವುದು, ಇನ್ನೊಬ್ಬರ ಎಂಜಲನ್ನು ತಿನ್ನದೇ ಇರುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು. ಆದರೆ ವಿಧವೆಯನ್ನೊ ಅಥವಾ ಕೆಲವು ಜನಾಂಗದವರನ್ನೊ ನೋಡಿದರೆ ಮೈಲಿಗೆಯೆಂದು ಸ್ನಾನ ಮಾಡುವುದಕ್ಕೆ ವೈಜ್ಞಾನಿಕವಾಗಿ ಯಾವ ಆಧಾರವೂ ಇಲ್ಲ. ಇದು ಕೇವಲ ಮೂಢ ನಂಬಿಕೆಯಿಂದ ಕೂಡಿರುತ್ತದೆ. ಕೆಲವು ಮೂಢ ನಂಬಿಕೆಗಳು ಮತ್ತು ಪದ್ಧತಿಗಳು ತಲೆ ತಲಾಂತರಗಳಿಂದ ಆಚರಿಸಲ್ಪಡುತ್ತವೆ. ಕೆಲವರು ಚಿಕ್ಕ ವಯಸ್ಸಿನಲ್ಲೇ ಮೂಢ ನಂಬಿಕೆಗಳನ್ನು ಹಿರಿಯರಿಂದ ಕಲಿತು ಜೀವನ ಪರ್ಯಂತ ಯಾಂತ್ರಿಕವಾಗಿ ಅನುಸರಿಸುತ್ತಾರೆ. ಇವುಗಳನ್ನು ಮಾನಸಿಕ ಅಸ್ವಸ್ಥತೆಯ ಕುರುಹುಗಳೆಂದು ಪರಿಗಣಿಸುವುದು ತಪ್ಪಾಗುತ್ತದೆ. ಇನ್ನು ಕೆಲವರಲ್ಲಿ ಮೂಢ ನಂಬಿಕೆಗಳು ಮೊದಲು ಸ್ವಲ್ಪವಾಗಿದ್ದು ಇದ್ದಕ್ಕಿದ್ದ ಹಾಗೆ ಹೆಚ್ಚಾಗಬಹುದು. ಇಂತಹ ಸಂದರ್ಭಗಳಲ್ಲಿ ಅವು ಮಾನಸಿಕ ಅಸ್ವಸ್ಥತೆಯ ಕುರುಹಾಗಿರಬಹುದು.

ಮೂವತ್ತು ವರ್ಷದ ಕಲ್ಪನಾಳನ್ನು ತಲೆಭಾರದ ಚಿಕಿತ್ಸೆಗೋಸ್ಕರ ನನ್ನ ಬಳಿ ಕರೆದು ತಂದಿದ್ದರು. ಅವಳ ಜೊತೆಯಲ್ಲಿ ಬಂದಿದ್ದ ಅವಳ ಪತಿ ಮತ್ತು ದಾಯಾದಿಯ ಜೊತೆ ಮೊದಲು ಮಾತುಕತೆ ನಡೆಸಿದೆ. ಮಾನಸಿಕ ಅಸ್ವಸ್ಥತೆಯಲ್ಲಿ ಸಾಧಾರಣವಾಗಿ ರೋಗಿ ಒಬ್ಬರನ್ನೇ ಬೇರೆಯಾಗಿ ಪ್ರಶ್ನಿಸುತ್ತೇವೆ. ಇತರರ ಸಮ್ಮುಖದಲ್ಲಿ ವೈಯಕ್ತಿಕ ವಿಷಯಗಳನ್ನು ಹೇಳಲು ರೋಗಿ ಹಿಂಜರಿಯುತ್ತಾನೆ. ಇಷ್ಟಲ್ಲದೇ ರೋಗಿಯ ವೈಯಕ್ತಿಕ ವಿಷಯಗಳನ್ನು ರಹಸ್ಯವಾಗಿಡುವುದು ನಮ್ಮ ಕರ್ತವ್ಯ. ಅವಳ ಪತಿಗೆ ಎಲ್ಲಾ ವಿಷಯಗಳು ತಿಳಿದಿದ್ದರೂ ದಾಯಾದಿಗೆ ತಿಳಿದಿರಲಿಲ್ಲ. ಅವನಿಗೆ ಎಲ್ಲವನ್ನೂ ತಿಳಿಸಿದರೆ 'ಅವಳು ಹುಚ್ಚಿ' ಎಂದು ಹೇಳುವರೋ ಎಂಬ ಭಯ ಕಲ್ಪನಾಳಿಗೆ. ಅವಳ ದಾಯಾದಿಗೂ ನನಗೂ

ಪರಿಚಯವಿದ್ದುದರಿಂದ ಅವನ ಮೂಲಕ ನನ್ನಲ್ಲಿಗೆ ಬಂದಿದ್ದಳು.

ಅವಳ ಪತಿ ಮತ್ತು ತಾಯಿಯನ್ನು ಹೊರಗೆ ಕಳುಹಿಸಿದ ನಂತರ ನನ್ನ ಮೊದಲ ಪ್ರಶ್ನೆಗೆ ಕಲ್ಪನಾಳಿಂದ ಬಂದ ಉತ್ತರ ಅಳು. ಒಂದೇ ಸಮನೆ ಬಿಕ್ಕಿ ಬಿಕ್ಕಿ ಅತ್ತಳು. ಸಾಮಾನ್ಯವಾಗಿ ಜನರಿಗೆ ಇತರರು ಅಳುವುದನ್ನು ನೋಡಿ ಸಹಿಸಲು ಸಾಧ್ಯವಾಗುವುದಿಲ್ಲ. 'ಅದೇನು ಮಹಾ ಅಂತ ಅಳುತ್ತೀಯಾ, ಬಿಡಮ್ಮ' ಎಂದು ಕೆಲವು ಹಿತವಾದ ಮಾತುಗಳನ್ನಾಡಿ ಅಳುವನ್ನು ನಿಲ್ಲಿಸಲು ಪ್ರಯತ್ನಿಸುವುದು ಎಲ್ಲರ ಅನುಭವ. ಮನೋರೋಗ ಚಿಕಿತ್ಸಕರು ಅಳುವನ್ನು ನಿಲ್ಲಿಸಲು ಪ್ರಯತ್ನಿಸದೇ, ಇನ್ನೂ ಉತ್ತೇಜಿಸುವರು. ಅಳು ಕೂಡ ಒಂದು ರೀತಿಯ ಭಾವನೆ. ಈ ಭಾವನೆಯನ್ನು ಅದುಮಿಡಕೂಡದು. ಚೆನ್ನಾಗಿ ಅತ್ತ ನಂತರ ಮನಸ್ಸಿಗೆ ಹಿತವಾಗುತ್ತದೆ. ನಾವು ಅಳುವಿನ ಮೂಲವನ್ನು ತಿಳಿಯಲು ಪ್ರಯತ್ನಿಸಬೇಕು. ಕೆಲವು ನಿಮಿಷ ಅತ್ತ ನಂತರ ಕಲ್ಪನಾಳಿಗೆ ಸ್ವಲ್ಪ ಸಮಾಧಾನವಾಯಿತು. ಈ ಕಾಯಿಲೆ ಸಹಿಸಲಸಾಧ್ಯವಾದಷ್ಟು ಉಲ್ಬಣವಾಗಿದೆಯೆಂದು ತಿಳಿಸಿದಳು. ಈ ಕಾಯಿಲೆಯ ಬಗ್ಗೆ ಅನೇಕರನ್ನು ನೋಡಿ ಬೇಸತ್ತು ಹೋಗಿದ್ದಾಳೆಂದು ತಿಳಿಯಿತು. ಇದೇ ಕಡೆಯ ಪ್ರಯತ್ನವೆಂದೂ ಮತ್ತು ನಾನು ಅವಳಿಗೆ ಸಹಾಯ ಮಾಡದಿದ್ದಲ್ಲಿ ತನ್ನ ಜೀವನವನ್ನೇ ಕೊನೆಗಾಣಿಸುವಳೆಂದೂ ಹೇಳಿದಳು. ಅವಳಿಗೆ ತಲೆಭಾರ ಮತ್ತು ದವಡೆಯ ಬಿರುಸು (jaw stiffness). ಕೆಲವು ಬಾರಿ ಬಾಯಿ ತೆಗೆಯುವುದೇ ಕಷ್ಟವಾಗುತ್ತಿತ್ತು. ಯಾವ ವೈದ್ಯರ ಬಳಿ ಹೋದರೂ ಅವಳನ್ನು ಪರೀಕ್ಷಿಸಿ ಯಾವ ತರಹ ಕಾಯಿಲೆಯೂ ಇಲ್ಲವೆಂದು ಹೇಳುತ್ತಿದ್ದರು. ಕಲ್ಪನಾ ಓದಿದವಳು ಮತ್ತು ತಿಳುವಳಿಕಸ್ಥಳು. ಏನೂ ಇಲ್ಲದೇ ನೋವು ಹೇಗೆ ಬರಲು ಸಾಧ್ಯ ಎಂಬುದನ್ನು ತಾನೇ ಚಿಂತಿಸಲು ಪ್ರಾರಂಭಿಸಿದಳು. ಶಾರೀರಿಕ ಕಾಯಿಲೆ ಇಲ್ಲದಿದ್ದಲ್ಲಿ ಇದು ಮಾನಸಿಕ ಅಸ್ವಸ್ಥತೆಯಿಂದುಂಟಾಗಿರಬಹುದೆಂಬ ನಿರ್ಧಾರಕ್ಕೆ ಬಂದಳು. ಇಷ್ಟರ ಮಟ್ಟಿಗೆ ಮಾನಸಿಕ ಅಸ್ವಸ್ಥತೆಯ ಬಗ್ಗೆ ತಿಳುವಳಿಕೆ ಇರುವವರು ಕಡಿಮೆಯೆಂದೇ ಹೇಳಬೇಕು.

ಕಲ್ಪನಾಳಿಗೆ ತೊಂದರೆ ಪ್ರಾರಂಭವಾದದ್ದು ಸುಮಾರು ಎರಡು ವರ್ಷಗಳ ಹಿಂದೆ. ಪ್ರಾರಂಭದಲ್ಲಿ ಸಣ್ಣ ವಿಷಯಗಳಿಗೆಲ್ಲಾ ಬಹಳ ಯೋಚಿಸುವುದು ಮತ್ತು ಸಿಡಿಮಿಡಿಗೊಳ್ಳುವುದು ಪ್ರಾರಂಭವಾಯಿತು. ಇದ್ದಕ್ಕಿದ್ದಂತೆ ಮಡಿಯ ಆಚರಣೆ ಹೆಚ್ಚಾಯಿತು. ಸ್ನಾನ ಮಾಡಿದರೆ ಏಕೋ ಏನೋ ಇನ್ನೂ ಶುಚಿಯಾಗಲಿಲ್ಲ ಎನಿಸಿ ಬೆಳಿಗ್ಗೆ ಮತ್ತು ರಾತ್ರಿ ಎರಡು ಹೊತ್ತೂ ಸ್ನಾನ ಮಾಡಲು ಪ್ರಾರಂಭಿಸಿದಳು. ಅಲ್ಲಿಗೂ ಮೈಲಿಗೆ ಹೋಯಿತೆಂದು ಮನಸ್ಸಿಗೆ ಸಮಾಧಾನವಾಗುತ್ತಿರಲಿಲ್ಲ. ಕೆಲವು ಬಾರಿ ದಿನಕ್ಕೆ ಎರಡಕ್ಕಿಂತ ಹೆಚ್ಚು ಸಲ ಸ್ನಾನ ಮಾಡಿದ್ದೂ ಉಂಟು. ಪತಿ ಮತ್ತು ಮಕ್ಕಳು ಹೊರಗಿನಿಂದ ಬಂದರೆ ಅವರು ಮನೆಯ ಹೊರಗಡೆಯೇ ಕಾಲು ತೊಳೆದುಕೊಂಡು ಒಳಗೆ ಬರಬೇಕು. ಅವರು ಅಪ್ಪಿ ತಪ್ಪಿ ಕಾಲು ತೊಳೆಯದೇ ಒಳಗೆ ಬಂದರೆ ಪೂರ್ತಿ ಮನೆಯನ್ನೇ ನೀರು ಹಾಕಿ ಸ್ವಚ್ಛ ಮಾಡುವಳು. ಪೂರ್ತಿ ಮನೆಯನ್ನೇ ಸ್ವಚ್ಛಗೊಳಿಸುವುದು ಸುಲಭವಲ್ಲ. ಕೇವಲ ಮನೆಯ ಗೋಡೆ ಮತ್ತು ನೆಲ ಮಾತ್ರವಲ್ಲದೇ ಪ್ರತಿಯೊಂದು ಪಾತ್ರೆ, ಡಬ್ಬ, ಉಳಿದೆಲ್ಲಾ ಪದಾರ್ಥಗಳನ್ನು ತೊಳೆಯಬೇಕು. ಆಗಲೇ ಅವಳಿಗೆ ಒಂದು ರೀತಿಯ ಸಮಾಧಾನ. ದಿನಗಳುರುಳುತ್ತಿದ್ದಂತೆ ಮನೆಯನ್ನು ಶುಚಿಗೊಳಿಸುವುದು ಹೆಚ್ಚಾಯಿತು. ಇದು ಹೆಚ್ಚಾದಂತೆ ಅವಳೊಬ್ಬಳ ಕೈಯಲ್ಲೇ ಮನೆ ಶುಚಿಗೊಳಿಸುವುದು ಸಾಧ್ಯವಾಗುತ್ತಿರಲಿಲ್ಲ. ಅವಳ ಪತಿಯೂ ಈ ಕಾರ್ಯದಲ್ಲಿ ಸಹಭಾಗಿಯಾಗಬೇಕಾಯಿತು. ಈ ಮಧ್ಯೆ ಕೆಲಸದವಳನ್ನು ಮನೆಯೊಳಗೆ ಬರುವುದನ್ನು ತಪ್ಪಿಸಿದ್ದಳು. ಅಸ್ವಸ್ಥತೆಗಿಂತ ಮೊದಲು ಕೆಲಸದವಳು ಪಾತ್ರೆ ತೊಳೆದಿಟ್ಟರೆ ಹುಣಸೇ ಹಣ್ಣು ನೀರು ಚಿಮುಕಿಸಿ ತಾನೇ ತೊಳೆದುಕೊಂಡು ಒಳಗಿಡುತ್ತಿದ್ದಳು. ನಂತರ ಅದೇಕೋ ಅದು ಮಡಿಯೆನಿಸಲಿಲ್ಲ. ಹುಣಸೇ ಹಣ್ಣು ನೀರನ್ನು ಚಿಮುಕಿಸಿದ ನಂತರ ಅವಳ ಪತಿ ಎಲ್ಲಾ ಪಾತ್ರೆಗಳನ್ನು ತೊಳೆದಿಡಬೇಕು, ನಂತರ ತಾನೇ ಮತ್ತೆ ತೊಳೆದು ಒಳಗಿಡುತ್ತಿದ್ದಳು. ಕೆಲಸದವಳು ಇದನ್ನೆಲ್ಲಾ ನೋಡಿ ಎಲ್ಲರ ಹತ್ತಿರ ಹೇಳಿದರೆ ಅವಮಾನವಾಗುವುದೆಂಬ ಭಯದಿಂದ ಅವಳು ಹೋದ ನಂತರ ಎಲ್ಲವನ್ನೂ ಮಾಡಿಕೊಳ್ಳುತ್ತಿದ್ದಳು. ಮಕ್ಕಳು ಬಾಯಿಯಲ್ಲಿಟ್ಟ ಕೈಯಿಂದ ಅಕಸ್ಮಾತ್ ಮುಟ್ಟಿಕೊಂಡರೆ ಮೈಲಿಗೆ

ಯಾಯಿತೆಂದು ಅವರನ್ನು ಅನಾಮತ್ ಬಚ್ಚಲ ಮನೆಗೆ ಎತ್ತಿಕೊಂಡು ಹೋಗಿ ಉಟ್ಟ ಬಟ್ಟೆಯ ಮೇಲೆಯೇ ತಣ್ಣೀರನ್ನು ಹೊಯ್ಯುತ್ತಿದ್ದಳು (ಬಿಸಿ ನೀರಿಲ್ಲದಿದ್ದಾಗ) ಚಳಿಗಾಲದಲ್ಲಿ ಸಹ ಹೀಗೆಯೇ. ಇಲ್ಲವಾದರೆ ಸಹಿಸಲಸಾಧ್ಯ. ಮಕ್ಕಳಿಗೆ ಸಹ ಈ ರೀತಿಯಲ್ಲಿ ಕಷ್ಟ ಕೊಡುತ್ತೇನೆಂಬುದನ್ನು ಹೇಳಲು ಕಲ್ಪನಾಳಿಗೆ ಬಹಳ ಕಷ್ಟವಾಯಿತು. ದುಃಖದ ಕಡಲೊಡೆಯಿತು. "ಎಲ್ಲಕ್ಕೂ ಅನುಸರಿಸುವ ಪತಿ ಮತ್ತು ಮಕ್ಕಳಿಗೆ ನಾನು ನರಕವಾಗಿ ಬಿಟ್ಟಿದ್ದೇನೆ. ನನ್ನಂತವಳು ಇರಕೂಡದು. ನನಗೇನಾದರೂ ಕೊಟ್ಟು ಕೊಂದುಬಿಡಿ, ಡಾಕ್ಟ್ರೆ" ಎನ್ನುತ್ತಾ ಬಿಕ್ಕಿ ಬಿಕ್ಕಿ ಅತ್ತಳು. ಕಲ್ಪನಾಳಲ್ಲಿ ಮಾನಸಿಕ ದುಗುಡ ಮತ್ತು ಕೊರಗು ಬಹಳವಾಗಿದ್ದವು. ಮಾನಸಿಕ ಪರೀಕ್ಷೆ (psychological testing) ಕೂಡ ಇದನ್ನೇ ಸಮರ್ಥಿಸಿದವು. ಮನೋವಿಶ್ಲೇಷಣೆಗೆ (psycho-analysis) ವಾರಕ್ಕೊಮ್ಮೆ ಬಂದು ಹೋಗಲು ತಿಳಿಸಿದೆ.

ಸುಮಾರು ನೂರೈವತ್ತು ಮೈಲಿ ದೂರದ ಊರಿನವಳಾದರೂ ನಾನು ಹೇಳಿದಂತೆ ಚಾಚೂ ತಪ್ಪದೆ ಚಿಕಿತ್ಸೆಯನ್ನು ಪಡೆದಳು. ವಾರಕ್ಕೊಂದರಂತೆ ಆರು ಭೇಟಿಗಳು, ಎರಡು ವಾರಕ್ಕೊಂದರಂತೆ ಐದು ಭೇಟಿಗಳು. ತಿಂಗಳಿಗೊಂದರಂತೆ ಎರಡು ಭೇಟಿಗಳು, ಎರಡು ತಿಂಗಳಿಗೊಂದರಂತೆ ಎರಡು ಭೇಟಿಗಳು ನನ್ನ ಸಲಹೆಯಂತೆ ಒಟ್ಟು ಹದಿನೈದು ಭೇಟಿಗಳಾದವು. ಮನೋವಿಶ್ಲೇಷಣೆಯಲ್ಲಿ ರೋಗಿ ನಿಸ್ಸಂಕೋಚದಿಂದ ತನಗನಿಸಿದುದನ್ನೆಲ್ಲಾ ಹೇಳಬೇಕು. ಮನೋವಿಶ್ಲೇಷಣಾ ತಜ್ಞರು ರೋಗಿ ಒಂದು ಸಮಯದಲ್ಲಿ ಹೇಳಿದುದಕ್ಕೂ ಮತ್ತು ಇನ್ನಾವುದೋ ಸಮಯದಲ್ಲಿ ಹೇಳಿದುದಕ್ಕೂ ಏನಾದರೂ ಸಂಬಂಧವಿದೆಯೋ ಎಂದು ತಿಳಿಯಲು ಪ್ರಯತ್ನಿಸಬೇಕು. ಇದ್ದಕ್ಕಿದ್ದಂತೆ ಮಡಿಯ ಆಚರಣೆ ಹೆಚ್ಚಾಗಲು ಯಾವುದೋ ಪ್ರಬಲ ಕಾರಣವಿರಲೇಬೇಕು.

ಕಲ್ಪನಾಳಿಗೆ ಅವಳು ಮಾಡುತ್ತಿರುವುದು ಅವಳಿಗೇ ಬೇಸರ. ಅವಳಿಗಿಷ್ಟವಿಲ್ಲದಿದ್ದಾಗ್ಯೂ ಈ ರೀತಿ ಆಗುತ್ತಿರಲು ಕಾರಣವೇನಿರಬಹುದೆಂಬುದು ಕುತೂಹಲಕಾರಿಯೇ ಸರಿ. ಅವಳ ಇಚ್ಛೆಗೆ ವಿರುದ್ಧವಾಗಿ ಹೋಗುತ್ತಿರುವ ಈ ಶಕ್ತಿ ಯಾವುದು? ಇದು ಬೇರೆ ಯಾರೋ ಹೊರಗಿನಿಂದ ಹೇರಿಸಿ ಅವಳಿಂದ ಮಾಡಿಸುತ್ತಿರುವ ಶಕ್ತಿಯಲ್ಲ, ಇದು ಅವಳಲ್ಲೇ ಹುದುಗಿರುವ ಆಂತರಿಕ ಶಕ್ತಿ. ಇದನ್ನೇ ನಾವು ಅಪಪ್ರಜ್ಞೆ ಎಂದು ಕರೆಯುವುದು. ಅಂದರೆ ಅವಳ ಅಪಪ್ರಜ್ಞೆ ಈ ರೀತಿ ಮಾಡಿಸಲು ಏನೋ ಪ್ರಬಲವಾದ ಕಾರಣವಿರಬೇಕು. ಮೊದಲನೇ ಭೇಟಿಯಲ್ಲಿ ಆ ಕಾರಣ ನನಗೂ ತಿಳಿದಿರಲಿಲ್ಲ. ನಂತರದ ಭೇಟಿಗಳಲ್ಲಿ ಅವಳು ಹೇಳಿದುದನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿದ ನಂತರ ತಿಳಿಯಿತು. ಮೊದಲ ನಾಲ್ಕು ಭೇಟಿಗಳಲ್ಲಿ ತನ್ನ ತೊಂದರೆಗಳನ್ನು ಪದೇ ಪದೇ ವರ್ಣಿಸುವುದು ಮತ್ತು ಅಳುವುದರಲ್ಲೇ ಕಳೆಯಿತು. ಮೊದಲಿನ ಕೆಲವು ಭೇಟಿಗಳಲ್ಲಿ ಈ ರೀತಿಯಾಗುವುದು ಸಾಮಾನ್ಯ. ತಮ್ಮ ದುಃಖವನ್ನು ತೋಡಿಕೊಂಡ ನಂತರ ಮನಸ್ಸು ಹಗುರವಾಗಿ ಬಾಕಿ ವಿಷಯಗಳು ಹೊರಗೆ ಬರುವವು. ಐದನೆಯ ಭೇಟಿಯಲ್ಲಿ ಬಹು ಮುಖ್ಯ ವಿಷಯಗಳು ಹೊರಬಂದವು. ಕಲ್ಪನಾ ಹತ್ತು ವರ್ಷ ವಯಸ್ಸಿನಲ್ಲಿ ಒಬ್ಬ ಹುಡುಗನೊಂದಿಗೆ ಲೈಂಗಿಕ ಕ್ರಿಯೆಗಳಲ್ಲಿ ತೊಡಗಿದ್ದಳು. ಅವಳಿಗೇನೂ ತಿಳಿಯುತ್ತಿರಲಿಲ್ಲ. ಆಕೆಗಿಂತ ಸುಮಾರು ಏಳೆಂಟು ವರ್ಷ ಹೆಚ್ಚು ವಯಸ್ಸಿನ ಯುವಕನೊಬ್ಬ ಏನೇನೋ ಲೈಂಗಿಕ ಕ್ರಿಯೆಗಳಲ್ಲಿ ತೊಡಗಿದನೆಂದು ಅತ್ತಳು. ಅಂದಿನಿಂದ ಅವಳಲ್ಲಿ ತಾನು ಅಪವಿತ್ರಳು ಮತ್ತು ತನ್ನ ಶರೀರ ಹೊಲಸು ಎಂಬ ಭಾವನೆ ಮೂಡಿತು. ತನ್ನ ಅಪವಿತ್ರವಾದ ಶರೀರವನ್ನು ಗಂಡನಿಗೊಪ್ಪಿಸಲು ಇಷ್ಟವಿಲ್ಲದ್ದರಿಂದ ಮದುವೆ ಬೇಡವೆಂದು ನಿರ್ಧರಿಸಿದ್ದಳು. ಹಿರಿಯಳು ಮದುವೆಯಾಗದಿದ್ದರೆ ಅವಳ ತಂಗಿಯರ ಮದುವೆಯಾಗುವುದು ಕಷ್ಟವಾಗುವುದೆಂದು ತಂದೆ ತಾಯಿಗಳ ಒತ್ತಾಯ. ಏತಕ್ಕೋಸ್ಕರ ಮದುವೆ ಬೇಡ ಎಂದು ತಂದೆ ತಾಯಿಗಳಿಗೆ ಹೇಳಲು ನಾಚಿಕೆ. ಮದುವೆಯಾಗದಿದ್ದರೆ ತಂಗಿಯರ ಬಾಳಿಗೂ ಕಷ್ಟ. ಒಟ್ಟಿನಲ್ಲಿ ಉಭಯ ಸಂಕಟಕ್ಕೊಳಗಾದಳು. ಅವರಿಗೋಸ್ಕರ ಕಡೆಗೆ ಮದುವೆಯನ್ನೂ ಆದಳು. ತನಗಾದ ಅನುಭವವನ್ನು ಗಂಡನಿಗೂ ತಿಳಿಸಿದಳು. ಅವನು, "ಅದೇನು ಮಹಾ? ಚಿಕ್ಕವರಿರುವಾಗ ಬುದ್ಧಿಯಿಲ್ಲದೇ ಏನಾದರೂ ತಪ್ಪು ಮಾಡಿರು-

ತ್ತಾರೆ. ಅದಕ್ಕೆಲ್ಲಾ ಯೋಚಿಸಕೂಡದು," ಎನ್ನು ವನು. ಆದರೂ ಕಲ್ಪನಾಳಿಗೆ ತನ್ನ ಅಪವಿತ್ರವಾದ ಶರೀರವನ್ನು ಗಂಡನಿಗೆ ಕೊಡುತ್ತಿದ್ದೇನೆಂಬ ಬೇಜಾರು. ಇನ್ನೊಂದು ವಿಷಯ ಆ ಭೇಟಿಯಲ್ಲಿ ಹೊರಗೆ ಬಂದಿತು. ಆಗಿಂದಾಗ್ಗೆ ಅವಳಿಗೆ ಅವಳ ಭಾವಂದಿರು ಸತ್ತುಹೋಗಲಿ ಎಂಬ ಭಾವನೆ ಬರುವುದು. ಆಗ ಅವಳಿಗೇ ಬಹಳ ಬೇಜಾರಾಗಿ ತನ್ನ ಕೆನ್ನೆಗೆ ಮೆದುವಾಗಿ ಹೊಡೆದುಕೊಂಡು 'ಬಿಡ್ತು' ಎನ್ನುವಳು. ಆಗ ಸ್ವಲ್ಪ ಸಮಾಧಾನ ವಾಗುವುದು. ಇಂತಹ ಕೆಟ್ಟ ಯೋಚನೆಗಳು ಏಕೆ ಬರುತ್ತವೋ ಎಂದು ಮತ್ತೆ ಅತ್ತಳು. ಮುಂದಿನ ಐದು ಭೇಟಿಗಳಲ್ಲಿ ಈ ಎರಡು ವಿಷಯಗಳು ಪದೇ ಪದೇ ಹೊರಬಂದವು. ಇವೆಲ್ಲಾ ಹೊರಬಂದುದರ ಫಲವಾಗಿ ಅವಳ ಅಸ್ವಸ್ಥತೆ ಸ್ವಲ್ಪ ಕಡಿಮೆಯಾ ಯಿತು. ಮನಸ್ಸು ಸ್ವಲ್ಪ ಹಗುರವಾಯಿತು. ಆದರೆ ಮಡಿಯ ತೊಂದರೆಯೇನೂ ಕಡಿಮೆಯಾಗಿರಲಿಲ್ಲ. ಇದಾದ ನಂತರದ ಭೇಟಿಯಲ್ಲಿ ಮತ್ತೆ ಕೆಲವು ಮುಖ್ಯ ವಿಷಯಗಳು ಹೊರಬಂದವು. ಕಲ್ಪನಾಳ ತಂದೆ ಬಹಳ ಕೋಪಿಷ್ಠನೆಂದೂ ಮತ್ತು ತಾಯಿ ಶಾಂತ ಸ್ವಭಾವದವಳೆಂದೂ ತಿಳಿಸಿದಳು. ತಂದೆಯ ಕೋಪ ಅವಳಿಗೂ ಬಂದಿದ್ದು, ಯಾವುದೇ ವಿಷಯದಲ್ಲಾಗಲಿ ಬಹಳ ಕೋಪ ಬರುವುದೆಂದು ಹೇಳಿದಳು. ಅವಳ ಪತಿ ತದ್ವಿರುದ್ಧ. ಯಾವಾಗಲೂ ಹಸನ್ಮುಖವುಳ್ಳ ವನು. ಅವನ ಪತಿಯ ಶಾಂತ ಸ್ವಭಾವ- ದಿಂದಾಗಿ ತಮ್ಮ ಸಂಸಾರದ ಸ್ಥಿತಿ ಅಧೋಗತಿಗಿಳಿ ದಿದೆಯೆಂದು ಬೇಜಾರುಪಟ್ಟಳು. ಅವಳ ಮಾವ (ಪತಿಯ ತಂದೆ) ತೀರಿಕೊಂಡಾಗ ಸಾಕಷ್ಟು ಆಸ್ತಿ ಯನ್ನು ಮಕ್ಕಳಿಗೆ ಬಿಟ್ಟು ಹೋಗಿದ್ದರು. ಅವಳ ಭಾವಂದಿರು (ಪತಿಯ ಸಹೋದರರು) ಇದ್ದ ಹಣವನ್ನೆಲ್ಲಾ ಕಬಳಿಸಿದರು. ನಂತರ ಚೆನ್ನಾಗಿ ನಡೆ ಯುತ್ತಿದ್ದ, ತಂದೆ ಬಿಟ್ಟುಹೋದ, ವ್ಯಾಪಾರವನ್ನು ತಾವು ಇಟ್ಟುಕೊಂಡು ಕಲ್ಪನಾಳ ಪತಿಯನ್ನು ಹೊರದಬ್ಬಿದರು. ಕಲ್ಪನಾಳ ಪತಿಯ ಪಾಲಿಗೆ ಬಂದದ್ದು ಇದ್ದ ಮನೆಯ ಒಂದು ಭಾಗ ಮತ್ತು ಸಾಲದ ಹೊರೆಯಲ್ಲಿನ ಪಾಲು. ಕಲ್ಪನಾ ಈ ವಿಷಯದಲ್ಲಿ ಭಾವಂದಿರ ಮುಂದೆ ಮಾತನಾಡಲು ಹೋದರೆ ಅವಳ ಪತಿ, "ಅದು ಹಾಳಾಗಿ ಹೋಗಲಿ, ನಾನೂ ನಿನಗೇನು ಕಡಿಮೆ ಮಾಡುವುದಿಲ್ಲ, ಸುಮ್ಮ ನಿರು," ಎಂದು ತಡೆಯುವನು. ಕಡೆಗೆ ಅವಳ ಮೈಮೇಲಿನ ಒಡವೆಯನ್ನು ಮಾರಿ ಬಂದ ಹಣ ದಿಂದ ಕಬ್ಬಿಣದ ಸಾಮಾನಿನ ವ್ಯಾಪಾರ ಪ್ರಾರಂಭಿ ಸಿದನು. ಅವನ ದುರಾದೃಷ್ಟ- ಅದೂ ವಿಫಲ ವಾಗಬೇಕೆ? ಆಗ ಅವನಿಗುಳಿದಿದ್ದುದು ಮನೆ ಮತ್ತು ಅರವತ್ತೆಂಟು ಸಾವಿರ ರೂಪಾಯಿಗಳ ಸಾಲದ ಹೊರೆ. ಇದಕ್ಕೆಲ್ಲಾ ಕಾರಣರಾದ ಭಾವಂದಿ ರಿಗೇನಾದರೂ ಮಾಡಿಬಿಡಬೇಕೆಂಬ ವಿಪರೀತ ಕೋಪ ಬರುವುದು. ಅದನ್ನು ಹೇಗೊ ತಡೆದು ಕೊಳ್ಳುವಳು. ಅಂತಹ ಸಂದರ್ಭಗಳಲ್ಲಿಯೇ ಅವಳಿಗೆ ಭಾವಂದಿರು ಸಾಯಲಿ ಎಂಬ ಭಾವನೆ ಬರುವುದು. ಆ ರೀತಿ ಭಾವನೆ ಬಂದಾಗ, "ಛೆ! ನಾನೆಂತಹ ಕೆಟ್ಟವಳು," ಎಂದೆನಿಸಿ, ಕೆನ್ನೆಗೆ ಹೊಡೆ ದುಕೊಂಡು 'ಬಿಡ್ತು' ಎಂದ ಮೇಲೆ ಸಮಾಧಾನ ವಾಗುವುದು. ಒಟ್ಟಿನಲ್ಲಿ ಈ ಭೇಟಿಯಲ್ಲಿ ತಾನು ಅಪವಿತ್ರ ಮತ್ತು ಕೆಟ್ಟವಳು ಎಂಬ ಭಾವನೆ ಅವಳಿಗಿದ್ದಿತೆಂದು ತಿಳಿಯಿತು. ಕಲ್ಪನಾಳ ತೊಂದರೆ ಯಾದ ಮಡಿ ಮತ್ತು ಶುಚಿಗೂ ಅವಳು ಹೇಳು ತ್ತಿದ್ದ ಅಪವಿತ್ರತೆ ಮತ್ತು ಕೆಟ್ಟತನಕ್ಕೂ ಏನಾ ದರೂ ಸಂಬಂಧವಿರಬಹುದೆಂದು ನನಗೆ ಅನ್ನಿಸಿತು. ಕೆಲವು ಸಲ ನಾವು ನಮ್ಮ ಮನಸ್ಸಿನಲ್ಲಿ ಏನು ಅಂದು ಕೊಂಡಿರುತ್ತೇವೆಯೋ ಅದಕ್ಕೆ ತದ್ವಿರುದ್ಧವಾಗಿ ನಡೆಯುತ್ತೇವೆ. ಇದನ್ನು reaction formation ಎಂದು ಕರೆಯುತ್ತೇವೆ. ಅದೇ ರೀತಿ ಕಲ್ಪ ನಾಳಲ್ಲಿ ಅಪವಿತ್ರತೆ ಮತ್ತು ಕೆಟ್ಟತನದ ಬದಲು ಮಡಿ ಮತ್ತು ಶುಚಿಗಳು ಹೊರಗೆ ಕಾಣುತ್ತವೆ. ಶುಚಿಯ ಹಿಡಿತದ ಆಚರಣೆ ಆಂತರಿಕ ಕೊಳಕನ್ನು ತೊಳೆಯಲೋಸುಗ ಮಾಡುವ ಒಂದು ಪ್ರಯತ್ನ. ಇದನ್ನು ನಾವು undoing ಎಂದು ಕರೆಯುತ್ತೇವೆ. ಇದನ್ನು ನಾನು ಕಲ್ಪನಾಳಿಗೆ ಹೇಳಿದಾಗ ಅವಳು, "ಇರಬಹುದು ಡಾಕ್ಟ್ರೆ. ನೀವು ಹೇಳಿದಂತೆ ನನ್ನ ಮನಸ್ಸಿನಲ್ಲಿರುವುದು ನಿಜ ಮತ್ತು ನಾನು ಮಾಡು ತ್ತಿರುವುದೂ ನಿಜ. ಆದರೆ ಅವೆರಡಕ್ಕೂ ಸಂಬಂಧ ವಿದೆಯೆಂದು ನಂಬಲು ಕಷ್ಟ," ಎಂದಳು.

ಇದಾದ ನಂತರ ಕಲ್ಪನಾಳ ತೊಂದರೆ ಕಡಿಮೆ ಯಾಗಲು ಪ್ರಾರಂಭವಾಯಿತು. ಕ್ರಮೇಣವಾಗಿ ವಾರದಲ್ಲಿ ಐದು ಅಥವಾ ಆರು ದಿನಗಳು ಯಾವ

ತೊಂದರೆಯೂ ಇರುತ್ತಿರಲಿಲ್ಲ. ತೊಂದರೆ ಇಲ್ಲದಿದ್ದಾಗ ಅವಳಿಗೆ ಖುಷಿಯಾದರೆ ತೊಂದರೆಯಿದ್ದ ದಿನ ಅವಳಿಗೆ ಬಹಳ ಬೇಜಾರುಗುತ್ತಿತ್ತು. ತನ್ನ ತೊಂದರೆ ಇನ್ನೂ ಹೋಗಿಲ್ಲವೇ ಎಂಬ ಆತಂಕ. ಯಾವುದೇ ಕಾಯಿಲೆಯಾಗಲಿ, ಕ್ರಮೇಣ ಕಡಿಮೆಯಾಗಿ ನಿಲ್ಲಬೇಕೆ ಹೊರತು ಇದ್ದಕ್ಕಿದ್ದ ಹಾಗೆ ನಿಲ್ಲಕೂಡದು. ವಾರದಲ್ಲಿ ಕೆಲವು ದಿನಗಳು ಚೆನ್ನಾಗಿದ್ದು ಇದ್ದಕಿದ್ದ ಹಾಗೆ ಮತ್ತೆ ತೊಂದರೆ ಪ್ರಾರಂಭವಾಗಲು ಕಾರಣವೇನು ಎಂದು ಕಂಡುಹಿಡಿಯಬೇಕು. ತೊಂದರೆ ಪ್ರಾರಂಭವಾಗುವುದಕ್ಕೆ ಮುಂಚೆ ಏನು ಮಾಡುತ್ತಿದ್ದಳು, ಏನು ಮಾತನಾಡುತ್ತಿದ್ದಳು ಅಥವಾ ಅವಳ ಮನಸ್ಸಿನಲ್ಲಿ ಏನಿತ್ತು ಇತ್ಯಾದಿಗಳನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಬೇಕು. ಭಾವಂದಿರ ಬಗ್ಗೆ ಯಾವುದಾದರೂ ಮಾತುಕತೆಯಾದಾಗ ಹಿಂದಿನ ನೆನಪಾಗಿ ಅವರ ಮೇಲೆ ವಿಪರೀತ ಕೋಪ ಬರುವುದು. ಆಗ ಅವಳಿಗೆ ಬೇಜಾರಾಗುವುದು. ನಂತರವೇ ಅವಳ ಶುಚಿಯ ಆಚರಣೆ ಹೆಚ್ಚುವುದು.

ಕಲ್ಪನಾ ಹಿಂದೆ ವಿವರಿಸಿದ್ದ ಲೈಂಗಿಕ ಕ್ರಿಯೆಗಳ ಬಗ್ಗೆಯೂ ಮಾತನಾಡಿದಳು. ಮಕ್ಕಳು ಲೈಂಗಿಕ ಆಟಗಳಲ್ಲಿ ತೊಡಗುವುದು ಸಾಮಾನ್ಯವೇನೂ ಮತ್ತು ಮುಗ್ಧತೆಯಿಂದ ಮಾಡಿದ ಕಾರ್ಯಗಳನ್ನು ತಪ್ಪೆಂದು ಪರಿಗಣಿಸಕೂಡದೆಂದು ಅರಿತುಕೊಂಡಳು. ನಾವು ಮಕ್ಕಳಾಗಿದ್ದಾಗ ಮಾಡಿದ ತಪ್ಪುಗಳನ್ನು ಪ್ರಬುದ್ಧರಾದ ಮೇಲೆ ಮಾಡುವುದಿಲ್ಲ. ಇದನ್ನೆಲ್ಲಾ ಅರಿತುಕೊಂಡ ನಂತರ ಅವಳ ತೊಂದರೆ ಪೂರ್ಣವಾಗಿ ಕಡಿಮೆಯಾಯಿತು. ಜೀವನ ಕ್ಲಿಷ್ಟವೆನಿಸದೆ ತಾನೂ ಚೆನ್ನಾಗಿ ಬಾಳಬೇಕು ಎಂಬ ಆಸೆಯೂ ಹುಟ್ಟಿತು. ಇದಕ್ಕೆ ಸರಿಯಾಗಿ ಅವಳ ಪತಿಯ ವ್ಯಾಪಾರವೂ ಕುದುರಿಕೊಂಡಿದ್ದು ಮತ್ತಷ್ಟು ಸಹಾಯವಾಯಿತು. ಈಗಲೂ ಎರಡು ತಿಂಗಳಿಗೊಮ್ಮೆ ನನ್ನನ್ನು ನೋಡಲು ಬರುವಳು. ನಾಲ್ಕು ತಿಂಗಳಿಂದ ಮಡಿಯ ಅಥವಾ ಇನ್ಯಾವುದೇ ತೊಂದರೆಯೂ ಇಲ್ಲ. ತಲೆ ಭಾರ ಮತ್ತು ದವಡೆಯ ಬಿರುಸು ಹೋಯಿತು.

ಕಲ್ಪನಾಳ ಅಸ್ವಸ್ಥತೆಗೆ obsessive compulsive neurosis ಎಂದು ಕರೆಯುತ್ತೇವೆ. ಈ ಅಸ್ವಸ್ಥತೆಯಲ್ಲಿ ತನಗೆ ಬೇಡವೆಂದರೂ

ಕೆಲವು ಯೋಚನೆಗಳು ಪದೇ ಪದೇ ಬರುವುವು. ಈ ಯೋಚನೆಗಳು ರೋಗಿಗೇ ಇಷ್ಟವಾಗುವುದಿಲ್ಲ. ಒಂದು ರೋಗಿಗೆ ದೇವರನ್ನು ನೋಡಿದ ಕೂಡಲೇ ತನ್ನ ಪಾದರಕ್ಷೆಯನ್ನು ಕಳಚಿ ವಿಗ್ರಹದ ಮೇಲೆ ಎಸೆಯಬೇಕೆಂಬ ಭಾವನೆ ಬರುವುದು. ಅವನೆಷ್ಟು ಪ್ರಯತ್ನಪಟ್ಟರೂ ಈ ಯೋಚನೆಯನ್ನು ತೊಡೆದು ಹಾಕಲಾಗಲೇ ಇಲ್ಲ. ಇನ್ನೊಬ್ಬ ರೋಗಿಗೆ ಕುರ್ಚಿಗೆ ನಾಲ್ಕು ಕಾಲುಗಳೇಕಿರಬೇಕು. ಮೂರು ಕಾಲುಗಳೇಕಿರಕೂಡದು ಎಂಬ ಯೋಚನೆ ಪದೇ ಪದೇ ಬರುತ್ತಿತ್ತು. ಅವನ ಯೋಚನೆಯಲ್ಲಿ ಹುರುಳಿಲ್ಲವೆಂಬುದು ಅವನಿಗೂ ತಿಳಿದ ವಿಷಯವೇ. ಆದರೂ ಅದು ಹೋಗುವುದಿಲ್ಲ. ಇದೇ ರೀತಿ ರೋಗಿ ತನಗಿಷ್ಟವಿಲ್ಲದಿದ್ದರೂ ಕೆಲವು ಕಾರ್ಯಗಳಲ್ಲಿ ಪದೇ ಪದೇ ತೊಡಗುತ್ತಾನೆ. ಒಬ್ಬ ರೋಗಿಗೆ ತಾನು ಸ್ನಾನ ಮಾಡಿದ ಕೊಂಚ ಸಮಯದ ನಂತರ ಮೈ ಕೊಳಕು ಎನ್ನಿಸುವುದು. ಆಗ ತಾನು ಸ್ನಾನ ಮಾಡಿದೆನೋ ಇಲ್ಲವೋ ಎಂಬ ಅನುಮಾನ ಬಂದು ಮತ್ತೆ ಸ್ನಾನ ಮಾಡುವಳು. ದಿವಸಕ್ಕೆ ಐದಾರು ಬಾರಿ ಸ್ನಾನ ಮಾಡಿದರೂ ಸಮಾಧಾನವಿಲ್ಲ. ತಾನು ಸ್ನಾನ ಮಾಡಿದೆನೋ ಇಲ್ಲವೋ ಎಂಬುದು ಮರೆತುಹೋಗುವುದರಿಂದ ಈ ತೊಂದರೆಯಾಗುವುದೆಂದು ದಿನವೂ ಕ್ಯಾಲೆಂಡರಿನಲ್ಲಿ took bath ಎಂದು ಗುರುತು ಮಾಡುವಳು. ಆ ರೀತಿ ಮಾಡಿದ ನಂತರ ತನಗೆ ಅನುಮಾನ ಬಂದಾಗ ಕ್ಯಾಲೆಂಡರ್ ತೆಗೆದು ನೋಡುವಳು. ಆಗ ಇನ್ನೊಂದು ಅನುಮಾನ ಕಾಡಲು ಪ್ರಾರಂಭವಾಯಿತು. ಸ್ನಾನ ಮಾಡಿದ್ದೇನೊ ನಿಜ. ಆದರೆ ತಾನು ಸರಿಯಾಗಿ ಮಾಡಿದೆನೋ ಇಲ್ಲವೋ ಎಂದು. ಇದನ್ನು ಪರಿಹರಿಸಲು S (shower) G. S. (good shower) ಮತ್ತು P.G.S. (pretty good shower) ಎಂದು ಗುರುತು ಹಾಕಲು ಮೊದಲು ಮಾಡಿದಳು. ಈ ತರಹ ಮಾಡಿದಾಗ್ಯೂ ಅವಳ ತೊಂದರೆ ಪರಿಹಾರವಾಗಲಿಲ್ಲ. ತಾನು ಸರಿಯಾದ ಜಾಗದಲ್ಲಿ ಮತ್ತು ತಾರೀಕಿನಲ್ಲಿ ಗುರುತು ಮಾಡದೇ ತಪ್ಪು ಮಾಡಿರುವೆನೋ ಎಂಬ ಅನುಮಾನ ಕಾಡಲು ಮೊದಲಾಯಿತು. ಒಟ್ಟಿನಲ್ಲಿ ಇದು ಅನುಮಾನಗಳ ಕಾಯಿಲೆ. ಒಂದು ಅನುಮಾನಕ್ಕೆ ಪರಿಹಾರ ಹುಡುಕಿದರೆ ಇನ್ನೊಂದು ಅನುಮಾನ ಬರುವುದು. Obsessive compulsive neurosis ಎಳೆ ವಯಸ್ಸಿನ ಮತ್ತು ಮಧ್ಯಮ ವಯಸ್ಸಿನ ಸ್ತ್ರೀಯರಲ್ಲಿ ಹೆಚ್ಚು. ಈ ಅಸ್ವಸ್ಥತೆ ಹುಚ್ಚನಂತಹ ಕಾಯಿಲೆಯಲ್ಲದಿದ್ದರೂ ಇದನ್ನು ಗುಣಪಡಿಸುವುದು ಕಷ್ಟ. ಅಸ್ವಸ್ಥತೆಯ ಪ್ರಾರಂಭದಲ್ಲೇ ಚಿಕಿತ್ಸೆ ಪಡೆದರೆ ಪೂರ್ಣ ಗುಣಪಡಿಸಲು ಸಾಧ್ಯವುಂಟು. ✡

**(ನೈಜ ಸಂಗತಿ. ರೋಗಿಯ ಹೆಸರನ್ನು ಮಾತ್ರ ಕಾಲ್ಪನಿಕವಾಗಿಡಲಾಗಿದೆ.)**

**ಇದು ನಮ್ಮ ಬೆಳ್ಳಿಹಬ್ಬದ ವಿಶೇಷ ಸಂಚಿಕೆಗಾಗಿ ಆಮಂತ್ರಿತ ಲೇಖನ**



'ಮಾಡು ಇಲ್ಲವೆ ಮಡಿ'
ಎಂದರೇನಪ್ಪ ?
ಪೂಜೆಮಾಡುತಲಿರಲು
ಕೇಳಿದನು ತಿಪ್ಪ
ಮಾಡು ಎಂದರೆ ಗೂಡು
ಇದೋ ನೋಡು
ಮಡಿ ಎಂದರೆ ನಾನುಟ್ಟದ್ದು
ತಿಳಿಯಿತೆ ಬೆಪ್ಪ ?

— ಗೋವಾ

# ಮರೆವು ಮನುಜಗೆ ಸಹಜ

ಶ್ರೀನಿವಾಸ ತೋಫಖಾನೆ

ಮನೆಯ ಯಜಮಾನರು ತಮ್ಮ ಹತ್ತಾರು ಗೆಳೆಯರೊಂದಿಗೆ ಇನ್ನೇನು ಊಟ ಮುಗಿಸುವ ದರಲ್ಲಿದ್ದರು. ಅಷ್ಟರಲ್ಲಿ ಅಡಿಗೆಯ ಭಟ್ಟ ಗಡಿ ಬಿಡಿಯಿಂದ ನುಡಿದ, "ರಾಯರೆ, ರಾಯರೆ! ಒಂದು ನಿಮಿಷ. ಮರೆತೇಬಿಟ್ಟಿದ್ದೆ. ಶಾವಿಗೆ ಪಾಯಸ ಮಾಡಿದ್ದೆ. ಮೊದಲೇ ಬಡಿಸಬೇಕಿತ್ತು. ಈಗಲಾದರೂ..." ರಾಯರಿಗೆ ಅನಂತಭಟ್ಟನ ಸ್ವಭಾವ ಚನ್ನಾಗಿ ಗೊತ್ತು. ಅವರು ಮಾತ ನಾಡುವ ಮೊದಲೇ, "ಹೊಟ್ಟೆ ಭಾರವಾಗಿದೆ. ಪಾಯಸ ಬೇಡ," ಎಂದರು. ಭಟ್ಟರು ಬಲವಂತ ಮಾಡಿದರು. "ಏನಷ್ಟು ಇಲ್ಲ ಭಟ್ಟರೆ, ನಾವೆಲ್ಲ ಮೊದಲು ಬನಿಯನ್ ಹಾಕಿಕೊಂಡು ನಂತರ ಶರ್ಟ್ ಹಾಕಿಕೊಳ್ಳುತ್ತೇವೆ. ನೀವೋ ಮೊದಲು ಶರ್ಟ್ ಹಾಕಿ. ಮರೆತುಬಿಟ್ಟಿದ್ದ ಬನಿಯನ್ ಅದರ ಮೇಲೆ ತೊಡುವವರು," ಎಂದು ಮೋಜಿನ ಧಾಟಿಯಲ್ಲಿ ಅವರು ನುಡಿದರು. ಎಲ್ಲರೂ ಗೊಳ್ಳೆಂದು ನಕ್ಕದ್ದೇ ನಕ್ಕಿದ್ದು. ಅನಂತ ಭಟ್ಟ ಪೆಚ್ಚು ಮುಖ ಮಾಡಿ, "ನಾನೇನು ಮಾಡಲಿ ? ದೇವರು ಈ ಮರೆವನ್ನು ನನಗೆ ಅದೇಕೆ ಕೊಟ್ಟನೋ!" ಎಂದು ತನ್ನ ಮರೆಗುಳಿ ಸ್ವಭಾವಕ್ಕೆ ದೇವರನ್ನು ಹಳಿದ. ಹಿಂದೊಮ್ಮೆ ಸಾರು ಅನ್ನ ಉಣ್ಣುವಾಗ ರಾಯರು ಭಟ್ಟರನ್ನು ಕೇಳಿದ್ದರು: "ಏನು ಭಟ್ಟರೆ, ನನಗೆ ಬ್ಲಡ್ ಪ್ರೆಶರ್ ಎಂದೇನಾದರೂ ಡಾಕ್ಟರು ನಿಮಗೆ ಹೇಳಿದ್ದಾರೆಯೇ?" "ಇಲ್ಲ ರಾಯರೆ, ಹಾಗೇಕೆ ಹೇಳುತ್ತೀರಿ ?" ಎಂದು ಭಟ್ಟ ಕೇಳಿದ್ದಕ್ಕೆ, "ಸಾರಿಗೆ ಉಪ್ಪೇ ಹಾಕಿಲ್ಲವಲ್ಲ," ಎಂದರು. "ನಾಳೆ ನೆನಪಿನಿಂದ ಹಾಕುತ್ತೇನೆ, ಕ್ಷಮಿಸಿ," ಎಂದು ಭಟ್ಟ ನುಡಿದಿದ್ದ. ಮರುದಿನದ ಅನುಭವವೇ ಬೇರೆ. "ಏನು ಭಟ್ಟರೆ! ಇಂದು ಸಾಯಂಕಾಲ ಪೇಟೆ ಯಿಂದ ಉಪ್ಪು ತರಬೇಕೆಂದು ಕಾಣುತ್ತದೆ" ಎಂದು ರಾಯರು ನುಡಿದರು. "ಇಲ್ಲ, ಮನೆಯಲ್ಲಿಯ ಉಪ್ಪು ಇನ್ನೂ ತೀರಿಲ್ಲವಲ್ಲ," ಎಂದ ಭಟ್ಟ. "ಮನೆಯೊಳಗಿದ್ದ ಎಲ್ಲ ಉಪ್ಪನ್ನು ಈ ಸಾರಿಗೇ





ಹಾಕಿದಂತಿದೆ," ಎಂದರು ರಾಯರು. ಅನಂತಭಟ್ಟ ಬಾಯಿ ತೆರೆದು ಹಣೆ ಏರಿಸಿ ತಲೆ ಕೆರೆದುಕೊಂಡು ನುಡಿದ: "ಅಯ್ಯೊ, ಗ್ರಹಚಾರವೆ! ಮರೆತು ಇಂದು ಸಾರಿಗೆ ಉಪ್ಪು ಎರಡು ಸಲ ಹಾಕಿದೆನೋ ಏನೋ!" "ಮರೆಗುಳಿತನದ ಸ್ಪರ್ಧೆ ಏನಾದರೂ ಏರ್ಪಟ್ಟರೆ ಅದರಲ್ಲಿ ಮೊದಲನೆ ಬಹುಮಾನ ನಿಮಗೇನೇ ಭಟ್ಟರೆ," ಎಂದು ರಾಯರು ನಗೆಯಾಡಿದರು.

ಯಾರು ಹೆಚ್ಚು ಮರೆಯುತ್ತಾರೆ ಎಂದು ಇಂತಹ ಮೇಲಾಟ ನಡೆದುದೇ ಆದರೆ ನನ್ನ ಮನೆ ಯಾಕೆಯೂ ಹಿಂದೆಬೀಳುವದಿಲ್ಲವೆಂದು ನಾನು ಎದೆ ತಟ್ಟಿ ಹೇಳಬಲ್ಲೆ. ಹಾಲು ಕಾಯಿಸಲೆಂದು ಒಲೆಯ ಮೇಲೆ ಇಡುತ್ತಾಳೆ. ಅದು ಕಾಯುವ ವರೆಗೆ ಕೆಲ ನಿಮಿಷವಾದರೂ ತಾನು ಕಾಯಬೇಕಲ್ಲ! ಅದಕ್ಕಾಗಿ ಬೇರಿನ್ನೇನೊ ಕೆಲಸದಲ್ಲಿ ತೊಡಗುತ್ತಾಳೆ. ಹಾಲು ಉಕ್ಕಿ ಕಮರು ವಾಸನೆ ಹರಡಿದಾಗಲೆ ಆಕೆಗೆ ತಟ್ಟನೆ ನೆನಪಾಗುತ್ತದೆ, ಒಲೆಯ ಮೇಲೆ ಹಾಲು ಕಾಯಿಸಲು ಇಟ್ಟಿದ್ದೆ ಎಂಬುದು. "ಹೋದ ಜನ್ಮದಲ್ಲಿ ಅಗ್ನಿದೇವ ನಿನಗೆ ಮಗನಾಗಿದ್ದಿರಬೇಕು. ಅದಕ್ಕೆಂತಲೇ ಅತನಿಗೆ ನೀನೀಗಲೂ ಹಾಲು ಉಣಿಸುತ್ತಿ ಎಂದು ತೋರುತ್ತದೆ. ತಿಂಗಳ ಹಾಲಿನ ಬಿಲ್ಲಿನಲ್ಲಿ, ಅರ್ಧ ಪಾಲು ಗವಳಿಗನು ಹಾಲಿನಲ್ಲಿ ಬೆರೆಸಿದ ನೀರಿಗಾಗಿ ಇದ್ದರೆ ಕಾಲು ಭಾಗದಷ್ಟು ನಿನ್ನ ಮಗ ಅಗ್ನಿದೇವನಿಗೆ," ಎಂದು ನಾನೆಂದೊಡನೆ ನೋಡಬೇಕು ಆಕೆಯ ಮುಖ. "ಮೂಗುದುದಿಯೊಳಲ್ತೆ ಮುನಿಸು ಮುನಿಗಳ್ಗೆ" ಎಂದು ಮುದ್ದಣ ಅಂದು ಹೇಳಿದ್ದ. ಆದರೆ ಕೈಬೆರಳ ಮೇಲೆ ಕೂಡ ಎಣಿಸಲು ಬಾರದಷ್ಟು ಮುನಿಗಳು ಇಂದು ವಿರಳವಾಗಿರುವಾಗ ಅತನೇನಾದರೂ ಮರಳಿ ಜನಿಸಿ ಬಂದಿದ್ದರೆ, "ಮೂಗುದುದಿಯೊಳಲ್ತೆ ಮುನಿಸು ಮಹಿಳಾಮಣಿಗೆ," ಎಂದು ತನ್ನ ಮಾತನ್ನು ಬದಲಾಯಿಸುತ್ತಿದ್ದನೋ ಏನೊ! ಮತ್ತೆ ಮಾತನಾಡಲಾರಂಭಿಸಿದರೆ, "ಸಾಕು ನಿಮ್ಮ ಉಪನ್ಯಾಸ! ನಾನೇನು ಮಾಡಲಿ? ದೇವರೆ ನನ್ನ ತಲೆಯಲ್ಲಿ ಈ ಮರೆವನ್ನು ತುಂಬಿದ್ದಾನೆ," ಎನ್ನುತ್ತ ಆಕೆ ಕೂಡ ದೂಷಿಸುವುದು ಆ ದೇವರನ್ನೇ. ಪರಮಾತ್ಮನೇ ತನ್ನ ಮರೆವಿಗೆ ಜವಾಬ್ದಾರ ಎಂದೇ ಆಕೆಯ ಖಚಿತ ಅಭಿಪ್ರಾಯ.

ಆದರೆ ನಮ್ಮ ನೆರೆಮನೆ ಇಂದಿರಾಬಾಯಿಯವರು ಈ ಮಾದರಿಗೆ ಸೇರಿದವರಲ್ಲ. ಯಾವುದಾದರೊಂದು ಮದುವೆ ಮುಂಜಿವೆ ಹಬ್ಬ ಹುಣ್ಣಿವೆಗಳಂಥ ಸಂದರ್ಭ ಸಿಕ್ಕರೆ ಸಾಕು, ಹಲವಾರು ವರುಷಗಳ ಹಿಂದೆಯೇ ಜರುಗಿದ ತಮ್ಮ ಸೋದರಮಾವನ ಮಗನ ಮುಂಜಿವೆ, ತನ್ನ ತಂಗಿಯ ಮದುವೆ ಹೀಗೇನೇನೋ ಬಂದಲ್ಲಿ ಅವರಲ್ಲಿ ಎಲ್ಲವನ್ನೂ ನೆನಪಿನ ಸೂಚಿನ ಬುದ್ಧಿಯಿಂದ ಹೇಳಿಕೊಳ್ಳುವಾಗ ಹೇಳಲು ಹೊಸದೊಂದು ಬಟ್ಟೆಯನ್ನೇ ನೆಯ್ದುಬಿಡುತ್ತಾರೆ. ಆ ಮಾತು ಈ ಮಾತು ಆರಂಭಿಸಿ ಕೊನೆಗೆ ಕಡವೆಂದು ಕೇಳಿ ಒಯ್ಯುವ ಸಕ್ಕರೆ, ಚಹದ ಪುಡಿ, ಒಳ್ಳೆಣ್ಣೆ, ರವೆ, ಲಿಂಬೆಹಣ್ಣು ಮರಳಿ ಕೊಡಲು ತಪ್ಪಿಕೂಡ ಆಕೆಗೆ ನೆನಪಾಗುವುದಿಲ್ಲ. ಕಡ ಕೊಟ್ಟವರು ಒಂದೇ ಕೈಯಿಂದ ಕೊಟ್ಟವರಾದರೂ ತಮ್ಮ ಎರಡೂ ಕೈಯಲ್ಲಿ ಧೈರ್ಯ ತಂದುಕೊಂಡು ಕೇಳಿದರೆ, ಎನ್ನುತ್ತಾರೆ: "ಅಯ್ಯ ನನ್ ಕರ್ಮ್s ಮರತ್s ಬಿಟ್ಟಿದ್ದೆ. ಇಷ್ಟ್ಯಾಕ ಮರವು ಕೊಟ್ಟಾನೋ ದೇವರು." ಮರೆವನ್ನು 'ಆತನೇ' ಕೊಡುತ್ತಾನೆಂದು ಆಕೆಯ ತಿಳುವಳಿಕೆ.

ನಮ್ಮ ಆಫೀಸಿನ ಸಹೋದ್ಯೋಗಿ ಮಹಾಶಯರೊಬ್ಬರಿದ್ದಾರೆ. ಆ ಇಂದಿರಾಬಾಯಿಯ ಕುಲಕ್ಕೇ ಸೇರಿದವರು ಅವರು. ತಿಂಗಳ ಕೊನೆಯ



ವಾರ ಬಂದಿತೆಂದರೆ ಗೆಳೆಯರಲ್ಲಿ ಅವರಿವರ ಹತ್ತಿರ ಹೋಗುತ್ತಾರೆ. ಆ ಸುದ್ದಿ ಈ ಸುದ್ದಿ ಮಾತನಾಡಿ ಹಣ ಕೈಗಡ ಕೇಳುತ್ತಾರೆ. ಅವರೇ ವಿನೋದವಾಗಿ ವಿವರಿಸುವಂತೆ ಅವರಿಗೆ ತಿಂಗಳ ಮೊದಲ ವಾರ ಕೈಯಲ್ಲಿ ನೋಟು ಇರುವುದರಿಂದ ಅದು ಕಾಗದದ ವಾರ, ನೋಟೆಲ್ಲ ಮಟಮಾಯ ವಾಗುವದರಿಂದ ಎರಡನೆ ವಾರ ಬರೀ ಬಿಡಿ ಕಾಸಿನ ವಾರ. ಮೂರನೆಯ ವಾರವೋ ಅವೂ ಕರಗಿ ಹೋಗಿ ಕಳವಳದ ವಾರ. ನಾಲ್ಕನೆಯ ವಾರ ಕೈಗಡದ ವಾರವೆಂದು ಬೇರೆ ಹೇಳಬೇಕೆ? ಸ್ವರ್ಗ ದಿಂದ ಇಳಿದ ಗಂಗೆ ಶಿವನ ಜಡೆಯಲ್ಲಿ ಸಿಲುಕಿ ಕೊಂಡಾಗ ಉಗ್ರ ತಪವನ್ನಾಚರಿಸಿ ಭಗೀರಥ ಆಕೆಯನ್ನು ಮತ್ತೆ ಪಡೆದ, ತನ್ನ ಮುತ್ತಾತಂದಿರ ಉದ್ಧಾರ ಮಾಡಿದ. ಆದರೆ ಈ ಮಹಾನು ಭಾವರ ಕೈಯಲ್ಲಿ ಸಿಲುಕಿಕೊಂಡ ಹಣ ಯಾವ ಉಗ್ರ ತಪಸ್ಸಿನಿಂದಲೂ ಮರಳಿ ಸುಲ ಭವಾಗಿ ಬರುವಂತಹದಲ್ಲ. ಕಿಬ್ಬದಿಗೆ ಚೇಳು ಕಡಿದಂತೆ ಎಂದು ಸರ್ವಜ್ಞ ನುಡಿಯುವಂತೆ ಹಣ ಕೊಟ್ಟವರು ಚೇಳಿನ ಪಾತ್ರ ವಹಿಸಿದ್ದಾರೆ, "ಸಾರಿ ಸರ್! ಮರೆತೇಬಿಟ್ಟಿದ್ದೆ. ಮುಂದಿನ ಮೊದ ಲನೆ ತಾರೀಖಿಗೆ ಖಂಡಿತಾ ಕೊಡುತ್ತೇನೆ," ಎಂದು

ತಾರೀಖಿನ್ನೂ ಮತ್ತೆ ಮರೆತೇಬಿಡುತ್ತಾರೆ.

ಸುತ್ತೆಲ್ಲ ಸಮಾಜದಲ್ಲಿ ಅನಂತಭಟ್ಟರಂತೆ ನಮ್ಮ ಇಂದಿರಾಬಾಯಿಯಂತೆ ಹಲವಾರು ಜನ ಮರೆಗುಳಿಗಳ ಬಳಗಕ್ಕೆ ಸೇರಿದವರಿದ್ದಾರೆ. ಹೀಗಿದ್ದರೂ ಕಾಲೇಜ್ ಪ್ರೊಫೆಸರುಗಳನ್ನು ಮಾತ್ರ ಅದೇಕೆ ಮರೆಗುಳಿಗಳೆಂದು ಬಗೆದರೋ ಶಾಲೆಯ ಮಾಸ್ತರಿಗೆ ಬುದ್ಧಿ ಇಲ್ಲ ಎಂಬ ಗಾದೆಯನ್ನು ಎಲ್ಲರೂ ಬಲ್ಲರು. ಭಾರತೀಯ ಭಾಷೆಯಲ್ಲಿ ಕಾಲೇಜ್ ಎಂದರೆ ಮಹಾವಿದ್ಯಾ ಲಯ, ಅಂದರೆ ದೊಡ್ಡ ಶಾಲೆ. ಈ ದೊಡ್ಡ ಶಾಲೆ ಯ ಮಾಸ್ತರರೂ ದೊಡ್ಡವರೇ. ಎಂದಮೇಲೆ ಈ ದೊಡ್ಡ ಮಾಸ್ತರರ ಬುದ್ಧಿಯ ಅಭಾವವೂ ದೊಡ್ಡದೇ. ಇದರಿಂದಾಗಿ ಅವರಿಗೆ ಮರೆವು ತೀರಾ ಸ್ವಾಭಾವಿಕ. ಎಂತಲೇ ಗಂಟೆ ಬಾರಿಸಿ ದರೂ ತಾವು ಕ್ಲಾಸಿಗೆ ಹೋಗಬೇಕೆಂಬುದನ್ನೂ ಕೆಲವರು ಮರೆಯುತ್ತಾರೆ. ಇನ್ನೂ ಕೆಲವರು ತಮ್ಮ ಉಪನ್ಯಾಸ ಒಂದು ಗಂಟೆ ಪೂರ್ತಿಯಾಗಿ ನಡೆಸ ಬೇಕೆಂಬುದನ್ನೂ ಮರೆತು. ವಿದ್ಯುತ್ ಪೂರೈಕೆಯ ಅಭಾವದಿಂದಾಗಿ ಬಾನುಲಿ ಕೇಂದ್ರ ತನ್ನ ಕಾರ್ಯ ಕ್ರಮವನ್ನು ಹಠಾತ್ತನೇ ನಿಲ್ಲಿಸಿಬಿಡುವಂತೆ, ತಮ್ಮ ರೆಕಾರ್ಡ್ ನಿಲ್ಲಿಸಿಬಿಡುತ್ತಾರೆ. ಮತ್ತೆ ಕೆಲ ವರು ಹಾಗಲ್ಲ. ಗಂಟೆಯಾದದ್ದನ್ನೇ ಮರೆತು



ತಮ್ಮ ಕ್ಲಾಸನ್ನು ಮುಂದುವರಿಸುತ್ತಾರೆ. ಜೇಬಿನಲ್ಲಿ ಹಣವಿಲ್ಲದೇ ಸಿಟಿ ಬಸ್ ಏರಿ ಪೇಚಿಗೆ ಸಿಲುಕಿಕೊಳ್ಳುವುದು, ಬಟನ್ ಹಾಕಿಕೊಳ್ಳಲು ಮರೆಯುವುದು ಇವೇ ಮೊದಲಾದವುಗಳು ಪ್ರಾಧ್ಯಾಪಕರ ಮರೆಗುಳಿತನಕ್ಕೆ ಕೈಗನ್ನಡಿಯಾಗಿವೆಯೆಂದು ಬೇರೆ ಹೇಳಬೇಕಿಲ್ಲ.

ಬಹುಶಃ ಗುರುಗಳಲ್ಲಿರುವ ಈ ಅಂಶ ಸಾಂಕ್ರಾಮಿಕ ರೋಗದಂತೆ ವಿದ್ಯಾರ್ಥಿಗಳಿಗೂ ಅಂಟಿಕೊಂಡಿರಬೇಕು. ಇಷ್ಟೆಲ್ಲಾ ಹಣ ವೆಚ್ಚ ಮಾಡಿ ತನ್ನ ಪಾಲಕರು ತನ್ನನ್ನೇಕೆ ಹಳ್ಳಿಯಿಂದ ನಗರಕ್ಕೆ ಕಳುಹಿಸಿದರು ಎಂಬುದನ್ನು ಓರ್ವನು ಮರೆತರೆ ವಿದ್ಯೆಯ ಸಂಪಾದನೆಯೇ ತನ್ನ ಮುಂದಿರುವ ಗುರಿ ಅದಕ್ಕಾಗಿ ತಾನು ಓದಬೇಕು ಎಂಬುದನ್ನು ಇನ್ನೋರ್ವನು ಮರೆಯುತ್ತಾನೆ. ಪರೀಕ್ಷೆಯಲ್ಲಿ ಕಾಪಿ ಮಾಡಬಾರದೆಂಬ ಆದೇಶವನ್ನು ಮತ್ತೊಬ್ಬ ಮರೆತರೆ ಮಗದೊಬ್ಬ ಆವರಿವರಿಗೆ ಹಣ ಕೊಟ್ಟು ಪ್ರಭಾವ ಬೀರಿ ಪಾಸ್ ಕ್ಲಾಸನ್ನು ಗಿಟ್ಟಿಸಬಾರದೆಂಬುದನ್ನು ಮರೆಯುತ್ತಾನೆ.

ಮಾನವರಲ್ಲಿ ಮರೆವು ಇಷ್ಟೊಂದು ಪ್ರಮಾಣದಲ್ಲಿ ಸಾರ್ವತ್ರಿಕವಾಗಿ ಹರಡಿಕೊಂಡಿರಬೇಕಾದರೆ ಇದರ ಮೂಲವೆಲ್ಲಿ? ಐದು ವರುಷದ ಮಗುವೊಂದು ಅಕಾಲ ಮರಣಕ್ಕೆ ಗುರಿಯಾದಾಗ ಬ್ರಾಹ್ಮಣನೋರ್ವ ರಾಜನಲ್ಲಿರುವ ದೋಷವೇ ಕಾರಣವೆಂದ, ರಾಮಾಯಣದ ಕಾಲದಲ್ಲಿ. ರಾಜನಾದ ರಾಮನಾದರೂ ಈ ದೋಷಾರೋಪಣೆಯನ್ನು ಒಪ್ಪಿಕೊಂಡ. ಮೇಲಾಗಿ ಯಥಾ ರಾಜಾ ತಥಾ ಪ್ರಜಾ ಎಂದ ಮೇಲೆ ಪ್ರಜೆಗಳಲ್ಲಿನ ಈ ಮರೆವಿನ ಮೂಲ ಅವರ ಆಳರಸರಲ್ಲಿಯೇ. ನೂರಾರು ಸಚಿವರು, ಸಾವಿರಾರು ಶಾಸಕರು ಇಂದಿನ ನಮ್ಮ ಆಳರಸರು. ನಾವೆಲ್ಲ ಮಾನವರಾದರೆ ಅವರು ಅತಿಮಾನವರು. ಸಂಬಳ, ದಿನದ ಭತ್ತೆ, ಸಾರಿಗೆ ಸೌಕರ್ಯ, ಸುಸಜ್ಜಿತ ನಿವಾಸ ಸೌಲಭ್ಯ, ಸ್ಥಾನಮಾನ, ಒಂದೇ ಎರಡೇ ಅವರಿಗಿರುವಷ್ಟು ಬೇರಾರಿಗೂ ಇಲ್ಲ. ಉಳಿದವರಂತೆ ಇವರು ಹಲವಾರು ವರುಷ ಸೇವೆ ಸಲ್ಲಿಸಬೇಕಾಗಿಲ್ಲ. ಐದು ವರುಷ ದುಡಿದರಾಯ್ತು, ಇವರಿಗೆ ಜೀವಾವಧಿ ನಿವೃತ್ತಿವೇತನ. ಮಾನವರಲ್ಲಿಯ ಸಾಮರ್ಥ್ಯಕ್ಕಿಂತ ಅತಿಮಾನವರಲ್ಲಿ ಅದು ಅಧಿಕತರವಾಗಿರುವಂತೆ ಮರೆವೂ ಅವರಲ್ಲಿ ಅತ್ಯಧಿಕವಾಗಿರಲು ಸಾಕು. ಆದುದರಿಂದಲೇ ಈ ಅತಿಮಾನವರು ಯಾರ ಮತಗಳಿಂದ ಚುನಾಯಿತರಾಗಿರುತ್ತಾರೋ ಅವರ ಹಿತವನ್ನೇ ಮರೆಯುತ್ತಾರೆ. ವಿಷಯ ಗೊತ್ತಿರಲಿ, ಗೊತ್ತಿಲ್ಲದಿರಲಿ ಪ್ರತಿಯೊಂದನ್ನೂ ಕುರಿತು ವೇದಿಕೆಯ ಮೇಲೆ ನಿಂತು ಅತಿ ದೀರ್ಘಕಾಲದವರೆಗೆ ಅತ್ಯದ್ಭುತವಾದ ವಾಗ್ ವೈಖರಿಯಿಂದ ಅತ್ಯುಚ್ಚ ಸ್ವರದಲ್ಲಿ ಅತ್ಯುನ್ನತ ವಿಚಾರಧಾರೆಯನ್ನು ಹರಿಯಿಸಿ, ಹತ್ತಾರು ಸಲ ಕೇಳುಗರನ್ನೂ ಎಚ್ಚರಿಸಿ, ಹುಚ್ಚರನ್ನಾಗಿಸುತ್ತಾರೆ. ವೇದಿಕೆಯಿಂದ ಕೆಳಗಿಳಿಯುತ್ತಲೇ ಮಂಡಿಸಿದ ವಿಚಾರಗಳೆಲ್ಲ ನೀಡಿದ ಆಶ್ವಾಸನೆಗಳೆಲ್ಲ ಅವರ ಮೆದುಳಿನಿಂದ ಕೆಳಗಿಳಿದುಬಿಡುತ್ತವೆ. ಜನರಾದರೂ ಅಷ್ಟೇ. ಕೈಗೆ ಕೈ ತಟ್ಟಿ ಸೊಳ್ಳೆಯನ್ನೋ ನೊಣವನ್ನೊ ಹೊಡೆದೋಡಿಸುವಂತೆ ಈ ಅತಿಮಾನವರ ವಿಚಾರಗಳನ್ನು ಚಪ್ಪಾಳೆ ತಟ್ಟುವುದರ ಮೂಲಕ ದೂರ ಸರಿಸುತ್ತಾರೆ. ಅರ್ಥಾತ್ ಮರೆಯುತ್ತಾರೆ. ಯಾವ ರಾಜ್ಯ ಬಂದರೇನು, ರಾಗಿ ಬೀಸುವುದು ತಪ್ಪಲಿಲ್ಲ ಎಂದು ತಮಗೆ ತಾವೇ ಸಮಾಧಾನ ಹೇಳಿಕೊಳ್ಳುತ್ತಾರೆ.



ಮಾನವ ಸಹಜವಾದ ಸರ್ವವ್ಯಾಪಿಯಾದ ಈ ಮರೆಯುವಿಕೆ ಎಂಬುದು ಮೋಹದ ಮರಿ ಇದ್ದಂತೆ. ಮಾನವನ ಪೂರ್ವಜರೆಂದು ಪರಿಗಣಿಸಲಾಗುವ

ಮಂಗನಲ್ಲಿ ಕೂಡ ಈ ಮೋಹ ಈ ಮರೆವು ಮನೆ ಮಾಡಿಕೊಂಡಿತ್ತೆಂಬುದಕ್ಕೆ ರಾಮಾಯಣವೇ ಸಾಕ್ಷಿ. ಸುಗ್ರೀವನು ನಿರಪರಾಧಿಯಾದರೂ ಅಣ್ಣ ವಾಲಿ ಅತನಿಗೆ ಅಪಚಾರಗೈದು ರಾಜ್ಯದಿಂದ ಹೊರ ದೂಡಿದ. ಅವನ ಸತಿ ರುಮೆಯನ್ನು ಅನ್ಯಾಯ ವಾಗಿ ಕಸಿದುಕೊಂಡ. ಇಂಥ ದುರುಳನ ವಧೆಗಾಗಿ ಸುಗ್ರೀವ ರಾಮನ ನೆರವನ್ನು ಕೋರಿದ. ಭವಿಷ್ಯದಲ್ಲಿ ತನ್ನ ಕೃತಿಯ ಬಗ್ಗೆ ಜನ ಏನೆಂದುಕೊಳ್ಳುವರೆಂಬು ದನ್ನು ಕೂಡ ಲೆಕ್ಕಿಸದೇ ತನ್ನ ನೂತನ ಮಿತ್ರನಿ- ಗೋಸ್ಕರ ಶ್ರೀರಾಮ ಮರವೊಂದರ ಮರೆಗೆ ನಿಂತು ವಾಲಿಯನ್ನು ಕೊಂದು ಹಾಕಿದ. ಸುಗ್ರೀವನಿಗೆ ರುಮೆ ಮರಳಿ ಸಿಕ್ಕಳು. ಆದರೆ ತಾನು ರಾಮನಿ ಗಾಗಿ ಸೀತೆಯನ್ನು ಶೋಧಿಸಿ ಪ್ರತ್ಯುಪಕಾರ ಸಲ್ಲಿ ಸಬೇಕಾದುದನ್ನು ಇನಿಯಳ ಮೇಲಿನ ಮೋಹ ದಿಂದಾಗಿ ಆ ಮಹಾವಾನರ ಮರೆತುಬಿಟ್ಟ. ಅಂದು ಮಂಗರಾಯನೆ ಮರೆತನೆಂದಾಗ ಆತನ ಮೊಮ್ಮಗ, ಮನುಜ, ಮರೆಗುಳಿತನದ ಸ್ವಭಾವದವನಾಗಿದ್ದರೆ ಏನಚ್ಚರಿ? ದುಷ್ಯಂತ ಮಹಾರಾಜ ಶಕುಂತಲೆ ಯನ್ನು ಪ್ರೀತಿಸಿ ಗಾಂಧರ್ವವಿಧಿಯಿಂದ ಅವಳನ್ನು ಮದುವೆಯಾಗಿ ಆಮೇಲೆ ಅವಳನ್ನು ಹಸ್ತಿನಾ ಪುರಕ್ಕೆ ಕರೆಸಿಕೊಳ್ಳುವುದಾಗಿ ರಮಿಸಿ ಹೇಳಿ ಆಶ್ರಮ ದಿಂದ ತೆರಳಿದ ನಂತರ ಎಲ್ಲವನ್ನೂ ಮರೆತುಬಿಟ್ಟ. ಇಷ್ಟೇ ಅಲ್ಲ, ಸ್ವತಃ ಶಕುಂತಲೆಯೇ ಅವನ ಅರಮನೆಗೆ ಹೋಗಿ ಹಲವು ತೆರನಾಗಿ ಹೇಳಿಕೊಂ- ಡರೂ ಅವಳನ್ನು ಗುರುತಿಸದಷ್ಟು ಮರೆತು ಬಿಟ್ಟಿದ್ದ. ಇಂತು ಮರೆತುದಕ್ಕೆ ದುಷ್ಯಂತ ಹೊಣೆ ಯಾಗಿರದೆ ಮುಂಗೋಪಿ ಮಹರ್ಷಿ ದೂರ್ವಾಸನ ಶಾಪವೇ ಕಾರಣವೆಂದು ಮಹಾಕವಿ ಕಾಳಿದಾಸ ಚಿತ್ರಿಸಿದ್ದರೂ ಆ ದೊರೆ ದುಷ್ಯಂತ ಮರೆತದ್ದು ಸುಳ್ಳೇನಲ್ಲವಲ್ಲ!

ತೇನವಿನಾ ತೃಣಮಪಿನ ಚಲತಿ (ಆತನ ಪ್ರೇರಣೆ ಯಿಲ್ಲದೆ ಒಂದು ಹುಲ್ಲುಕಡ್ಡಿ ಕೂಡ ಅಲು- ಗಾಡದು) ಎಂದು ಹಿರಿಯರು ಹೇಳಿರುವಾಗ ಈ ಪ್ರಪಂಚದಲ್ಲಿ ಮರೆವು ಮಾನವನಲ್ಲಿ ಸೇರಿಕೊಂಡಿ ರುವುದು ಕೂಡ ಪರಮಾತ್ಮನ ಪ್ರೇರಣೆಯಿಂ ದಾಗಿಯೇ ಎಂದಾಯಿತು. ಮೋಡದಲ್ಲಿ ನೀರು ಉಂಟು. ಎಂತಲೆ ಅದು ನೀರನ್ನು ಕೊಡುತ್ತದೆ. ಪರಮಾತ್ಮನು ಮಾನವನಿಗೆ ಮರೆವನ್ನು ದಯ



ಪಾಲಿಸಬೇಕಾದರೆ ಆ ದಯಾಘನನಲ್ಲಿ ಅದು ಇದ್ದಿರಲೇಬೇಕು. ಆದರೆ ವೇದಾಂತವು ಪರಮಾತ್ಮ "ಪ್ರಜ್ಞಾನಘನ"ಎಂದು ಸಾರುತ್ತದೆ. ಆತ ಜ್ಞಾನ- ನಿಧಿ, ಅರಿವಿನ ಗಟ್ಟಿ ಎಂದ ಮೇಲೆ ಈ ಮರೆವು ಅವನಲ್ಲಿರಲು ಅದೆಂದು ಸಾಧ್ಯ? ರೊಟ್ಟಿಮಾಡು ವವರ ಕೈಗೆ ಹಿಟ್ಟು ಅಂಟಿಕೊಳ್ಳುವಂತೆ ಮಾಯಾವಿ ಪರಮೇಶ್ವರ ಮಾಯೆಯನ್ನೂ ಸೃಷ್ಟಿಸುವಾಗ ಆ ಮಾಯೆಯ ಸೋಂಕು ಅವನಿಗೆ ತಗುಲಿರಬೇಕು. ಇದ್ದುದನ್ನು ಮರೆಮಾಡುವದು ಮಾಯೆಯ ಸ್ವಭಾವ. ಹೀಗಿರುವಾಗ ಆತನ ಪ್ರಜ್ಞಾನ ಕೊಂಚ ಮರೆಯಾಗಿ ಮರೆವು ಸೇರಿಕೊಂಡಿರಬೇಕು. ದೇವರು ಮರೆಯುತ್ತಾನೆಂಬುದಂತೂ ಅನುಭವಸಿದ್ಧ ಸತ್ಯ. ಸೌಂದರ್ಯ ಐಶ್ವರ್ಯ ಸಾಮರ್ಥ್ಯ ಪಾಂಡಿತ್ಯ ಇವೆಲ್ಲವುಗಳನ್ನೂ ಕೆಲವರಿಗೆ ಕೊಟ್ಟು ಮರೆಯು ತ್ತಾನೆ. ಮರೆದಾಡುವಂತೆ ಮಾಡುತ್ತಾನೆ. ಇನ್ನು ಹಲವರಿಗೆ ಇವನ್ನೆಲ್ಲ ಕೊಡಲು ಮರೆಯುತ್ತಾನೆ. ಅವರನ್ನು ಕುರೂಪಿಗಳನ್ನಾಗಿಯೋ ಕಡುಬಡವ ರನ್ನಾಗಿಯೊ ಬಲಹೀನರನ್ನಾಗಿಯೋ ಬುದ್ಧಿಗೇಡಿ ಗಳನ್ನಾಗಿಯೋ ಮಾಡುತ್ತಾನೆ ಇದರಿಂದಾಗಿಯೇ ಮಾನವ-ಮಾನವರಲ್ಲಿ ಆರ್ಥಿಕ ಅಸಮಾನತೆ, ಸಾಮಾಜಿಕ ವಿಭಿನ್ನತೆ, ರಾಜಕೀಯ ಅಸ್ಥಿರತೆ ಉಂಟುಮಾಡಿ ಹೋರಾಟ, ಏರಾಟ, ಸೆಣಸಾಟ




ಕಳವಳ, ಚಳುವಳಿ, ಸಂಘರ್ಷಣಗಳಿಗೆ ಎಡೆಮಾಡಿ ಕೊಡುತ್ತಾನಲ್ಲವೇ ಈ ಮರೆಗುಳಿ ದೇವರು?

ಈ ತೆರನಾದ ಮರೆವು ದೇವನಿರ್ಮಿತವಾಗಿರಲಿ ಅಥವಾ ಮಾನವನ ಮೆದುಳಿನಲ್ಲಿಯ ವಿಶಿಷ್ಟ ಕೋಶಗಳ ಕಾರ್ಯಾಚರಣೆಯಲ್ಲಿಯ ಅಶಕ್ತಿಯಿಂದ ಉದ್ಭೂತವಾಗಿರಲಿ ಏನೇ ಇದ್ದರೂ ಇದು ಮಾನವನಿಗೆ ಒಂದು ವಿಧದಲ್ಲಿ ಮಹಾ ಅನರ್ಥಕಾರಕವಾಗಿದ್ದರೆ ಇನ್ನೊಂದು ವಿಧದಲ್ಲಿ ಮಹದುಪಕಾರವೂ ಅಹುದು. ಅರಿದೊಡೆ ಶರಣ. ಮರೆದೊಡೆ ಮಾನವ ಎಂದು ಶಿವಶರಣರು ನುಡಿದಿದ್ದಾರೆ. ತನ್ನ ನಿಜ ಸ್ವರೂಪವನ್ನು ಮರೆತೇ ಮಾನವ ಜೀವಿ ಜನಿಸುತ್ತಾನೆ. ತಾನಾರು ? ಇಲ್ಲಿ ಬಂದುದೇಕೆ? ಹೋಗುತ್ತಿರುವದು ಅದೆಲ್ಲಿ ? ಬದುಕಿನಲ್ಲಿ ತಾನು ಏನು ಮಾಡತಕ್ಕದ್ದು? ಸ್ಥಿರವಾದುದು ಯಾವುದು. ಅಸ್ಥಿರವಾದುದು ಯಾವುದು ಎಂಬಿವೇ ಹಲವಾರು ಪ್ರಶ್ನೆಗಳ ಸರಿಯಾದ ಉತ್ತರವನ್ನೂ ಮರೆತು ಉಸಿರಾಡುವರೆಗೂ ಕಾಲ ನೂಕುತ್ತಾನೆ. ಸರಿಯಾದ ಗುರಿ ಯಾವುದೆಂಬುದನ್ನು ಅರಿಯದೇ ದಾರಿಯನ್ನು ಕ್ರಮಿಸುತ್ತಾನೆ. ಕೊನೆಗೊಮ್ಮೆ ಮರಣವನ್ನಪ್ಪುತ್ತಾನೆ. ಇದೆಲ್ಲ ಮರೆವಿನ ಅನರ್ಥವಾದರೆ ಇನ್ನೊಂದು ರೀತಿಯಲ್ಲಿ ಇದೇ ಮರೆವು ಮಾನವನಿಗೆ ಒಳ್ಳೆಯದನ್ನೂ ಮಾಡುತ್ತದೆ. ತನ್ನ ಹೃದಯಕ್ಕೆ ತೀರ ಹತ್ತಿರವಾದ ವ್ಯಕ್ತಿ ಕಣ್ಮರೆಯಾದಾಗ, ಅತ್ಯಂತ ಪ್ರೀತಿಯ ವಸ್ತುವೊಂದು ಕಳೆದುಹೋದಾಗ ವ್ಯಥೆ ಪಡುತ್ತೇವೆ. ಆಹಾರ ಪಾನೀಯ ವಿನೋದ ವಿಹಾರ ಸಡಗರ ಸಮಾರಂಭ ಎಲ್ಲವನ್ನೂ ತೊರೆಯುತ್ತೇವೆ. ಆದರೆ ಕಾಲಾಂತರದಲ್ಲಿ ಮತ್ತೆ ಮೂಲ ಸ್ಥಿತಿಗೆ ತಲಪುತ್ತೇವೆ. ಅರ್ಥಾತ್ ವ್ಯಕ್ತಿಯ ಅಗಲುವಿಕೆ ಹಾಗೂ ನಚ್ಚಿನ ವಸ್ತುವಿನ ಪ್ರಣಾಶದಿಂದ ಉಂಟಾದ ಸಂತೋಪವನ್ನು ಮರೆಯುತ್ತೇವೆ. ಮನುಷ್ಯನಿಗೆ ತೀರ ಸಹಜವಾದ ಈ ಮರೆವು ಒಂದು ವೇಳೆ ಇದ್ದಿಲ್ಲವಾಗಿದ್ದರೆ ನಾವು ನಮ್ಮ ಬದುಕನ್ನು ಮುಂದುವರೆಸುವುದೇ ದುಸ್ತರವಾಗುತ್ತಿತ್ತು.

✡

**ಇದು ನಮ್ಮ ಬೆಳ್ಳಿ ಹಬ್ಬದ ವಿಶೇಷ ಸಂಚಿಕೆಗಾಗಿ ಆಮಂತ್ರಿತ ಲೇಖನ**

# ಪದಾರ್ಥ ಚಿಂತಾಮಣಿ

–೩೩–

**ಜಗನ್ನಾಥ** ಅಥವಾ **ಪುರಿ** ನಗರ ನಮ್ಮ ದೇಶದಲ್ಲಿ ಅತಿ ಪ್ರಸಿದ್ಧವಾದ ತೀರ್ಥಕ್ಷೇತ್ರ. ಅದು ಭಾರತದ ಏಳು ಮೋಕ್ಷದಾಯಕ ಕ್ಷೇತ್ರಗಳಲ್ಲಿ ಒಂದೆಂದು ಪುರಾಣೋಕ್ತವಾಗಿದೆ. ಈ ಕ್ಷೇತ್ರ ಇಂಗ್ಲಿಷ್ ಭಾಷೆಗೆ ಎರಡು ಶಬ್ದಗಳನ್ನು ದಾನಮಾಡಿದೆ. ಅವು ಮಾತ್ರ ಕ್ಷೇತ್ರದ ಪಾವಿತ್ರ್ಯಕ್ಕೆ ಸಂಬಂಧಿಸಿದವಲ್ಲ. ಒಂದು ನಮ್ಮ ಮಧ್ಯಯುಗದಲ್ಲಿ ಜವಳಿ ವ್ಯಾಪಾರದ ಸಮೃದ್ಧಿಗೆ ಸಾಕ್ಷಿಯಾದ **ಜೆಕನೆಟ್** (jaconet) ಎಂಬುದು. ಇದು **ಜಗನ್ನಾಥ** ಪದದ್ದೇ ಇಂಗ್ಲಿಷ್ ಅಪಭ್ರಂಶ ಹೊರತು ಬೇರೆ ಅಲ್ಲ. ಹಿಂದೆ ಬಂಗಾಲದಿಂದ ರಫ್ತಾಗುತ್ತಿದ್ದ ಜಗತ್ಪ್ರಸಿದ್ಧ ಮಸ್ಲಿನ್ನಿಗಿಂತ ಸ್ವಲ್ಪ ದಪ್ಪವಾದ ಹತ್ತಿ ಬಟ್ಟೆಯೊಂದು ಉತ್ಕಲ[ಒಡಿಸಾ]ದಿಂದ ಪಾಶ್ಚಾತ್ಯ ದೇಶಗಳಿಗೆ ಹೋಗುತ್ತಿದ್ದುದು **ಜಗನ್ನಾಥ ಪುರಿ**ಯಿಂದಾದ್ದರಿಂದ ಪಟ್ಟಣದ ಹೆಸರಿಂದಲೇ ಅದನ್ನು ಕರೆಯಲಾಯಿತು. ಇಂದು **ಜೆಕನೆಟ್** ಬಟ್ಟೆಯನ್ನು ಗಾಯಗಳಿಗೆ ಹಾಕುವ ಬ್ಯಾಂಡೇಜಿಗೆ ಉಪಯೋಗಿಸುತ್ತಾರೆ; ಅದು ಭಾರತದಿಂದ ರಫ್ತಾಗುತ್ತಲೂ ಇಲ್ಲ, ಆದರೆ ಹೆಸರು **ಜಗನ್ನಾಥದ್ದೇ** ಉಳಿದಿದೆ.

ಇನ್ನೊಂದು ಪದ ಈ ದೇಶಕ್ಕೆ ಒಳ್ಳೇ ಕೀರ್ತಿ ತರುವಂಥದಲ್ಲ. **ಜಗರ್ನಾಟ್** (juggernaut) ಎಂಬುದೂ **ಜಗನ್ನಾಥದ್ದೇ** ಇಂಗ್ಲಿಷ್ ಅಪಭ್ರಂಶ. ಇದು ಪುರಿಯ ಜಗನ್ನಾಥ ದೇವರ ರಥಕ್ಕೆ ಸಂಬಂಧಿಸಿದ ಒಂದು ಅಮಾನುಷ ಐತಿಹ್ಯದಿಂದ ಜನಿಸಿ ಪ್ರಚುರಗೊಂಡ ಪದ. ಆ ಪ್ರಚಂಡ ಗಾತ್ರದ ರಥದ ಉತ್ಸವ ಹೊರಟಾಗ ಹರಕೆ ಹೇಳಿಕೊಂಡ ಭಕ್ತರು ಅದರ ಮುಂದೆ ತಮ್ಮನ್ನು ಈಡಾಡಿಕೊಳ್ಳುತ್ತಿದ್ದರಂತೆ. ರಥದ ಗಾಲಿಗಳು ಅವರ ಮೇಲೆ ಹಾಯ್ದು ಅವರು ಜಿಪ್ಪಿಯಾಗಿ ಹೋಗುತ್ತಿದ್ದರು. ಈ ಕಥೆ ಕೇಳಿ, ಆ ರಥದ ಗಾತ್ರ ನೋಡಿ, ದಂಗಾದ ಯುರೋಪಿಯನ್ನರು ವ್ಯಕ್ತಿಗಳ ಸುಖ ದುಃಖವನ್ನು ಲಕ್ಷಿಸದೆ ತನ್ನ ಪಾಡಿಗೆ ತಾನು ಸಾಗುವ ಯಾವುದೊಂದು ನಿರ್ಘೃಣವಾದ ಶಕ್ತಿಗೆ **ಜಗರ್ನಾಟ್** ಎಂದು ಆಲಂಕಾರಿಕವಾಗಿ ಕರೆದರು. ಉದಾಹರಣೆಗೆ ಸರಕಾರಿ ಯಂತ್ರದ **ಜಗರ್ನಾಟ್**. ಇಂದು ಈ ಐತಿಹ್ಯ ವಾಸ್ತವಿಕವಾಗಿಲ್ಲ. ಆದರೆ ಇದು ಯುರೋಪಿಯನ್ನರ ಕಲ್ಪನಾವಿಲಾಸವೆಂದು ಹೇಳಲು ನನಗೆ ಧೈರ್ಯ ಸಾಲದು. ಭಕ್ತರ ಈ ಬಗೆಯ ಆತ್ಮಯಜ್ಞ ಹಿಂದೆ ಪ್ರಚಲಿತವಾಗಿತ್ತು. ನಾನು ಚಿಕ್ಕಂದಿನಲ್ಲಿ ಕೇಳುತ್ತಿದ್ದ **ಭಾಗಾನಗರದ** ಹಾಡಿನಲ್ಲಿ ಮಕ್ಕಳಿಲ್ಲದವಳೊಬ್ಬಳು ತನಗೆ ಮಗುವಾದರೆ ಅದನ್ನು ಭಾಗಾನಗರದ ದೇವರ ರಥದ ಕೆಳಗೆ ಈಡಾಡುವುದಾಗಿ ಹರಸಿಕೊಂಡಿರುತ್ತಾಳೆ. ಅಲ್ಲದೆ ಹಿಂದಿಯಲ್ಲಿಯೂ **ಜಗನ್ನಾಥಕಾ ರಥ** ಎಂಬೊಂದು ನುಡಿಕಟ್ಟು ಇದೆ. ಅದೂ ಯಾವ ಮಾನವೀಯ ಪರವೆಯಿಲ್ಲದೆ ಸಾಗುವ ಯಾವುದಾದರೂ ಅಬಾಧ್ಯ ವ್ಯವಸ್ಥೆಯನ್ನು ಸೂಚಿಸುತ್ತದೆ.

ವಿದೇಶಿ ಸ್ಥಳ ನಾಮವೊಂದು ನಮ್ಮ ಭಾಷೆಯಲ್ಲಿ ಒಂದು ಪ್ರಕ್ರಿಯೆಯ ಅಭಿಧಾನವಾಗಿ ರೂಢಿಯಾದುದಕ್ಕೆ **ಜುಲಾಬು** ಒಂದು ಉದಾಹರಣೆ. ಭೇದಿಗೆ ಕೊಡುವ ಯಾವುದೇ ಔಷಧಕ್ಕೆ ಈ ಹೆಸರು ಬಿದ್ದಿದೆ. ಮೂಲತಃ ಇದು **ಮೆಕ್ಸಿಕೋ** ದೇಶದ ಒಂದೂರಿನ ಹೆಸರು: **ಜಲಾಪ** (Jalapa ಅಥವಾ Xalapa). ಅಲ್ಲಿಂದ ಮೊಟ್ಟಮೊದಲು ತಂದ ಒಂದು ಬೇರನ್ನು ಪಾಶ್ಚಾತ್ಯರು ವಿರೇಚನಕ್ಕೆ ಬಳಸತೊಡಗಿದರು. ಆದರೆ ನಮ್ಮಲ್ಲಿಗೆ ಈ ಶಬ್ದ ಬಂದದ್ದು ಯುನಾನಿ ವೈದ್ಯರಿಂದ ಇರಬೇಕು; **ಜುಲಾಬ್** ಎಂಬುದಕ್ಕೆ **ಅರಬ್ಬಿ ಜುಲ್ಲಾಬ್** ಮೂಲ. ಬಹುಶಃ ಮೆಕ್ಸಿಕೋವಿನಿಂದ ಬಂದ ಈ ಔಷಧ ಮೂಲಿಕೆಯನ್ನು ಅರಬ ವೈದ್ಯರು ತಮ್ಮ ಔಷಧ ಪದ್ಧತಿಯಲ್ಲಿ ಅಳವಡಿ

ಸದ್ದು ಕೇಳಿಸಿತು. ಮುಂದೆ ಸಾಗಿದಂತೆ ದೈತ್ಯಾಕಾರದ ಮತ್ತಿ, ಬೀಟೆ, ಹೊನ್ನೆ, ಸಾಗವಾನಿ ಮರಗಳು ದಟ್ಟವಾಗಿ ಬೆಳೆದು ನಿಂತಿದ್ದವು. ಆ ದಟ್ಟ–ಡವಿಯ ರುದ್ರ ಭಯಂಕರ ಪರಿಸರದ ಸನಿಹದಲ್ಲಿ ಎಂಥ ಧೈರ್ಯಶಾಲಿಯ ಎದೆಯಲ್ಲಿಯೂ ಭೀತಿಯ ಛಾಯೆ ಮೂಡದಿರದು.

ಅನಂತರ ಇಕ್ಕಟ್ಟಿನ ಕಾಲು ಹಾದಿ ಇಳಿಜಾರಿನಲ್ಲಿ ಸಾಗಲಾರಂಭಿಸಿತು. ಜಾರುವಿಕೆಯಿಂದ ಕಂಗೆಟ್ಟ ನಾವು ಕೊನೆಗೂ ಕಾಡಿನ ನಡುವೆ ಹರಿಯುತ್ತಿದ್ದ ಚಿಕ್ಕ ಹೊಳೆಯೊಂದರ ದಡವನ್ನು ತಲುಪಿದೆವು. ಅದೇ ಭಾರ್ಗವೀ ನದಿ. ಹಿಂದೆ, ಪರಶುರಾಮನು ಈ ಪವಿತ್ರ ನದಿಯಲ್ಲಿ ಮಿಂದು ಮಾತೃಹತ್ಯಾ ದೋಷದಿಂದ ಬಿಡುಗಡೆ ಹೊಂದಿದನಂತೆ. ಸೂರ್ಯನು ಕಟಕ(ಕರ್ಕ)ರಾಶಿಗೆ ಬಂದಾಗ ನದಿಗಳಲ್ಲಿ ರಜೋತ್ಪತ್ತಿಯಾಗುವದೆಂಬ ಪ್ರತೀತಿಯಿದೆ. ಪರಶುರಾಮನ ವರದಿಂದಾಗಿ ಈ ನದಿಗೆ ರಜೋದೋಷವಿಲ್ಲದ ಕಾರಣ ಗಂಗಾದಿ ಸಕಲ ನದಿಗಳೂ ಆ ಕಾಲದಲ್ಲಿ ಮೀಯಲಿಕ್ಕೆ ಈ ನದಿಗೆ ಬರುತ್ತವೆಯೆಂದು ಆಸ್ತಿಕರು ನಂಬಿದ್ದಾರೆ(!) ಈ ನದಿಯು ಕಾವೇರಿಯಲ್ಲಿ ಸಂಗಮವಾಗುತ್ತದೆ.

ಈ ಭಾರ್ಗವಿ ನದಿಯ ದಡದಲ್ಲಿ ಮುಗಿಲು ಮುಟ್ಟುವಂತೆ ನಿಂತಿರುವ ವೃಕ್ಷವೇ ಮಹಾಚಂಪಕ ವೃಕ್ಷ. ಅಥವ ದೊಡ್ಡ ಸಂಪಿಗೆ ಮರ. ಈ ಮರದಡಿಯಲ್ಲಿ ಹಿಂದೆ ವಾಲಖಿಲ್ಯ, ವೈಖಾನಸ ಮೊದಲಾದ ಋಷಿ ಪುಂಗವರು ತಪಸ್ಸು ಮಾಡಿದರಂತೆ. ಬ್ರಹ್ಮಾಂಡ ಪುರಾಣದಲ್ಲಿ ಭಾರ್ಗವೀ ನದಿಯ ಮತ್ತು ಚಂಪಕ ವೃಕ್ಷಗಳ ಉಲ್ಲೇಖವಿದೆ. ದೊಡ್ಡ ಸಂಪಿಗೆ ಮರದ ಮೂರು ರೆಂಬೆಗಳನ್ನು ಬ್ರಹ್ಮ, ವಿಷ್ಣು ಮತ್ತು ಶಿವರ ಪ್ರತೀಕವೆಂದು ಜನರು ನಂಬುತ್ತಾರೆ. ಈ ಮರದಡಿಯಲ್ಲಿ ಅಸಂಖ್ಯಾತ ಸಾಲಿಗ್ರಾಮ ಶಿಲೆಗಳನ್ನು ಪ್ರತಿಷ್ಠಾಪಿಸಲಾಗಿದೆ. ಈ ಮರದಲ್ಲಿ ಬಿಡುವ ಸಂಪಿಗೆ ಹೂಗಳು ಅರ್ಧ ಅಡಿಯಷ್ಟು ನೀಳವಾಗಿರುತ್ತವೆ. ಈ ಹೂಗಳ ಕಂಪು ಸುತ್ತ ಮುತ್ತಲ ವನ್ಯ ಪ್ರದೇಶವನ್ನೆಲ್ಲಾ ವ್ಯಾಪಿಸಿರುತ್ತದೆ. ಮರದ ಮೇಲಿನಿಂದ ಹೂಗಳು ಸಾಲಿಗ್ರಾಮ ಶಿಲೆಗಳ ಮೇಲೆ ಉದುರುತ್ತಿರುವ ದೃಶ್ಯ ಚೇತೋಹಾರಿಯಾದುದು.

ದೊಡ್ಡ ಸಂಪಿಗೆ ಮರವಿರುವ ಪ್ರದೇಶ ಜೌಗು ಭೂಮಿ. ಮಳೆಗಾಲದಲ್ಲಿ ರಕ್ತವನ್ನೀಂಟುವ ಜಿಗಣೆಗಳು ಇಲ್ಲಿ ವಿಪರೀತವಿಲ್ಲ. ನಾವು ನದಿಯನ್ನು ದಾಟಿ ದೊಡ್ಡ ಸಂಪಿಗೆ ಮರದ ಬಳಿ ಬಂದಾಗ ಮಂಜಾವಿನ ಪ್ರಶಾಂತ ವಾತಾವರಣವಿತ್ತು. ಎತ್ತರವಾಗಿ ಬೆಳೆದಿದ್ದ ಮರಗಳ ರೆಂಬೆ ಕೊಂಬೆಗಳು ಒಂದಕ್ಕೊಂದು ಹೆಣೆದುಕೊಂಡು ಚಾವಣಿಯನ್ನೇ ನಿರ್ಮಿಸಿದ್ದುವು. ಸೂರ್ಯರಶ್ಮಿಯೇ ಭೂಮಿಯನ್ನು ಮುಟ್ಟುತ್ತಿರಲಿಲ್ಲ.

ಕೊಳ್ಳೆಗಾಲ ತಾಲ್ಲೂಕಿನ ಲೊಕ್ಕಳ್ಳಿಯಿಂದ ಸುಮಾರು ಮೂವತ್ತು ಜನರು ದೊಡ್ಡ ಸಂಪಿಗೆ ಮರದ ಪೂಜೆಗೆಂದು ಬಂದಿದ್ದರು. ಇವರಲ್ಲಿ ಹೆಂಗಸರು ಮಕ್ಕಳು ಸಹ ಇದ್ದರು. ದೊಡ್ಡ ಸಂಪಿಗೆ ಸ್ವಾಮಿಯ 'ಹರಾವು' ಮಾಡಲು ಇವರು ಸಾಮಾನು ಸರಂಜಾಮುಗಳನ್ನು ಹೊತ್ತು ಮೂವತ್ತು ಮೈಲುಗಳಷ್ಟು ದೂರವನ್ನು ನಡೆದುಕೊಂಡು ಬಂದಿದ್ದರು. ದೊಡ್ಡ ಸಂಪಿಗೆ ಸ್ವಾಮಿಯ ತಮ್ಮಡಿ ಮೈದುಂಬುವುದನ್ನೇ ಕಾಯುತ್ತಾ ಮೂರು ದಿನಗಳಿಂದ ಆ ದಟ್ಟಡವಿಯಲ್ಲಿ ತಂಗಿದ್ದ ಸುದ್ದಿಯನ್ನು ಕೇಳಿ ನಮಗೆಲ್ಲ ಅಚ್ಚರಿಯಾಯಿತು. ರಾತ್ರಿಯ ಸಮಯದಲ್ಲಿ ಕಾಡಾನೆಗಳ, ಕಾಡೆಮ್ಮೆಗಳ ಹಿಂಡು ನೀರು ಕುಡಿಯಲು ಸನಿಹದ ಭಾರ್ಗವೀ ನದಿಗೆ ಬರುತ್ತಿದ್ದುವಂತೆ. ದೊಡ್ಡ ಸಂಪಿಗೆ ಮರದ ಮೇಲಿನ ಅವರ ಅಚಲ ವಿಶ್ವಾಸ ಹೆಂಗಸರು ಮಕ್ಕಳೊಂದಿಗೆ ಆ ಗೊಂಡಾರಣ್ಯದಲ್ಲಿ ಮೂರು ದಿನಗಳ ಕಾಲ ತಂಗುವಷ್ಟು ಧೈರ್ಯವನ್ನು ನೀಡಿತ್ತು.

ನಾವು ಅಲ್ಲಿಗೆ ಹೋದಾಗ ಮುಳ್ಳಾವಿಗೆ (ಚೂಪಾದ ಕಬ್ಬಿಣದ ಮೊಳೆಗಳನ್ನು ನೆಟ್ಟಿರುವ ಮರದ ಪಾದರಕ್ಷೆ)ಯ ಮೇಲೆ ನಿಂತಿದ್ದ ತಮ್ಮಡಿಯು ಮೈದುಂಬಿ ದೊಡ್ಡ ಸಂಪಿಗೆ ಸ್ವಾಮಿ ಭಕ್ತರ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದ. ಮೋಡ ಮುಸುಕಿದ ಮತ್ತು ದಟ್ಟವಾಗಿ ಬೆಳೆದಿದ್ದ ಸುತ್ತ ಮುತ್ತಲ ಗಿಡ ಮರಗಳ ನೆರಳಿನಿಂದಾಗಿ ಆ ಮಹಾ ಚಂಪಕ ವೃಕ್ಷದ ಪೂರ್ಣ ಪ್ರಮಾಣದ ಸ್ಪಷ್ಟವಾದ ಛಾಯಾಚಿತ್ರವನ್ನು ತೆಗೆಯಲು ನಮ್ಮ ಸಾಧಾರಣ ಕ್ಯಾಮೆರಾಗೆ ಸಾಧ್ಯವಾಗಲಿಲ್ಲ.

ಆ ಕಾಡಿನಲ್ಲಿ ...

ಸೋಲಿಗರಿಗಂತೂ ದೊಡ್ಡ ಸಂಪಿಗೆಯ ಮರವೆಂದರೆ ಸಾಕ್ಷಾತ್ ಮಾತಾಡುವ ದೈವ. ತಮ್ಮಡಿ ಮರವನ್ನು ಪೂಜಿಸಿ ಒಂದು ಸುತ್ತು ಪ್ರದಕ್ಷಿಣೆ ಹಾಕುತ್ತಿದ್ದಂತೆ ಮೈದುಂಬಿ ಆವೇಶಭರಿತನಾಗುತ್ತಾನೆ. ಮುಗ್ಧ ಭಕ್ತರು ಒಬ್ಬೊಬ್ಬರಾಗಿ ತಮ್ಮಡಿಗೆ ತಮ್ಮ ಕಷ್ಟಗಳನ್ನು ನಿವೇದಿಸಿಕೊಂಡು ಸೂಕ್ತ ಉತ್ತರವನ್ನು ಪಡೆದು ಸಮಾಧಾನಚಿತ್ತರಾಗುತ್ತಾರೆ. ಮಳೆಗಾಲದಲ್ಲಿ ಇಲ್ಲಿಗೆ ಸೋಲಿಗರನ್ನುಳಿದು ಬೇರೆ ಯಾತ್ರಿಕರಾರೂ ಬರುವುದಿಲ್ಲ.

ದೊಡ್ಡ ಸಂಪಿಗೆ ಸ್ವಾಮಿ ಮುಳ್ಳಾವಿಗೆಯ ಮೇಲೆ ನಿಂತ ತಮ್ಮಡಿಯ ಮೈದುಂಬಿದಾಗ ಸೋಲಿಗರ ವಯೋವೃದ್ಧನೊಬ್ಬ ಅಡ್ಡ ಬಿದ್ದು ಕಣ್ಣಲ್ಲಿ ನೀರು ಹಾಕುತ್ತಾ ತನ್ನ ಕಷ್ಟಗಳನ್ನು ಸ್ವಾಮಿಗೆ ನಿವೇದಿಸಿಕೊಂಡ. ಕಳೆದ ವರ್ಷ ಆತನ ಹೆಂಡತಿಯನ್ನು ಸಲಗವೊಂದು ತುಳಿದು ಕೊಂದಿತಂತೆ. ಈ ವರ್ಷ ಕಾಸುಧೂಪ ತರಲು ಕಾಡಿಗೆ ಹೋದ ಆತನ ಮಗನನ್ನು ಕರಿ ನಾಗರ ಹಾವು ಕಚ್ಚಿ ಕೊಂದಿತಂತೆ. ತನ್ನ ಜೀವಮಾನದಲ್ಲಿ ಸ್ವಾಮಿಗೆ ಎಂದೂ ತಪ್ಪಿ ನಡೆಯದೆ ನಿಷ್ಠನಾಗಿ ನಡೆದು ಕೊಂಡು ಬಂದಿದ್ದರೂ ಈ ಕಷ್ಟ ಪರಂಪರೆಗಳನ್ನು ತನ್ನ ಮೇಲೇ ಏಕೆ ತಂದೊಡ್ಡಿದ್ದಾನೆ. ಸ್ವಾಮಿ! ಈ ಮುದಿಗೊಡ್ಡನ್ನು ಇನ್ನೂ ಯಾವ ಉದ್ದೇಶ ಸಾಧನೆಗಾಗಿ ಉಳಿಸಿದ್ದಾನೆ! ಎಂದು ಆ ವೃದ್ಧ ಅಳುತ್ತಾ ದೊಡ್ಡ ಸಂಪಿಗೆ ಸ್ವಾಮಿಯ ತಮ್ಮಡಿಯನ್ನು ಪ್ರಶ್ನಿಸಿದ.

"ಯಾವ ಯಾವ ಕಾಲಕ್ಕೆ ಏನೇನು ಆಗ್ ಬೇಕೋ ಅದೆಲ್ಲ ಆಗೇ ತೀರ್‌ಬೇಕು ಮಗನೆ."

ಎಂದ ತಮ್ಮಡಿಯ ಉತ್ತರದಿಂದ ಅವನಿಗೆ ಸಮಾಧಾನವಾದಂತೆ ಕಾಣಲಿಲ್ಲ. ದೊಡ್ಡ ಸಂಪಿಗೆ ಮರವೇ ಬಾಯ್ಬಿರೆದು ಅವನಿಗೆ ಉತ್ತರ ಹೇಳಬೇಕು!

ಸೋಲಿಗ ವೃದ್ಧನ ಸಂಕಷ್ಟಗಳನ್ನು ಕೇಳಿ ನಮ್ಮ ಮನ ಕಲಕಿತು. ತಮ್ಮ ಬವಣೆಗಳನ್ನು ಮೂಕವಾಗಿ ಸಹಿಸುತ್ತ ಕಲ್ಲು ಮರಗಳಿಗೆ ತಮ್ಮ ಸಂಕಷ್ಟಗಳನ್ನು ಹೇಳಿಕೊಂಡು ಶತಮಾನಗಳಿಂದ ಈ ಕಾಡಿನ ಕಗ್ಗತ್ತಲೆಯಲ್ಲಿ ದಿನ ತಳ್ಳುತ್ತಿರುವ ಸೋಲಿಗರ ದುರ್ಭರ ಬದುಕು ನಮ್ಮ ಕಣ್ಣೆದುರು ಮೂಡಿ ಮನ ಭಾರವಾಯಿತು.

ಲೊಕ್ಕಳ್ಳಿಯ ಭಕ್ತರಿಂದ ಪ್ರಸಾದ ವಿನಿಯೋಗವಾಯಿತು. ಮತ್ತೆ ಲೊಕ್ಕಳ್ಳಿಯವರು ಮೂವತ್ತು ಮೈಲುಗಳ ಕಠಿಣತರ ಕಾಡು ಹಾದಿಯ ಪ್ರಯಾಣಕ್ಕೆ ಸಿದ್ಧರಾದರು. ಆನೆಗಳು ನೀರು ಕುಡಿಯಲು ನದಿಗೆ ಬರುವ ಸಮಯವಾಯಿತೆಂದು ನಮ್ಮ ಮಾರ್ಗದರ್ಶಿ ಎಚ್ಚರಿಸಿದ. ನಾವು ನದಿಯನ್ನು ದಾಟಿದಾಗ ಸೋಲಿಗರ ಮುದುಕ ವಯಸ್ಸಿನ ಭಾರದಿಂದ ಬಾಗಿ ಮರದ ಕೆಳಗೆ ಕುಳಿತಿದ್ದ. ನಾವು ಅಲ್ಲಿಂದ ಹೊರಟಾಗ ಆತ ದೊಡ್ಡ ಸಂಪಿಗೆ ಸ್ವಾಮಿಯನ್ನು ಕುರಿತು ಮನ ಕಲಕುವಂತೆ ಓಲೆ ಪದವೊಂದನ್ನು ಹಾಡ ತೊಡಗಿದ.

ದೊಡ್ಡ ಸಂಪಿಗೆ ಗಣ ಸರಣ
ನೂರೊಂದು ಜಡೆಯ ಗಣ ಸರಣ
ಸಾವಿರ ಜಡೆಯ ಸಲ್ಲು ಬಿಟ್ಟು
ನೂರೊಂದು ಜಡೆಯ ಒಪರೀ ಬಿಟ್ಟು.
ಮೊಗ್ಗೀನ (ಮಕ್ಕಳ) ಕೊಂಬೆ ಮುರಿಯಾದಿಲ್ಲೆ
ಚಿಗರೀನ ಟೊಂಬೆ ಬಾಡಾದಿಲ್ಲೆ
ನೀ ಓದಿ ಮಡಗೋ ದೇವರಿಲೋ
[illegible] ಮಡಗಿ ದೇವರಿಲೋ

ನಾವು [illegible] ತಲುಪುವವರೆಗೂ ಸೋಲಿಗನ ಹಾಡು ಕಿವಿಯಲ್ಲಿ ಕ್ಷೀಣವಾಗಿ ಮೊಳಗುತ್ತಲೇ ಇತ್ತು. ●



## ಶಿಕ್ಷಣ

ಶಿಕ್ಷಣ ಹೇಗಿರಬೇಕೆಂದರೆ ಕಲಿಸಿದ್ದು ವಿದ್ಯಾರ್ಥಿಗೊಂದು ಅಮೂಲ್ಯ ಕೊಡುಗೆಯೆನಿಸಬೇಕೆ ಹೊರತು ಅದೊಂದು ಕಠೋರ ಕರ್ತವ್ಯವಾಗಿ ಪರಿಣಮಿಸಬಾರದು.

— ಐನ್‌ಸ್ಟೈನ್


ದದಗೆ ಬಿಬಿದ ದೆಗದಿ ದಾಗ್ದ್ರೆ
ಡಾ॥ರಾವ್


ಸಧ್ಯ ನಾನು ಕೊಡೆತರದೆ ಬಚಾವಾದೆ


ಹೋಟೆಲ್ ಬದುಕುವದಾರಿ
ಈ ದಿನದ ಸ್ಪೆಶಲ್ ಮೆಣಸಿನ ಕಷಾಯ

ಮಳೆಗಾಲದಲ್ಲೊಂದು ದಿನ...

# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ವೀಚಿ
(ಅ) ತೆರೆ (ಆ) ದಂಡೆ (ಇ) ರಸ್ತೆ (ಈ) ರೋಗ

೨. ತಾರಸಿ
(ಅ) ನಕ್ಷತ್ರ ಬಲ (ಆ) ಆಕಾಶ (ಇ) ತೊಂದರೆ ಕೊಡುವವ (ಈ) ಮನೆ ಛಾವಣಿಯ ಮೇಲ್ಭಾಗ

೩. ತಾರತಮ್ಯ
(ಅ) ಶ್ರೇಷ್ಠತನ (ಆ) ಹೆಚ್ಚುಕಡಿಮೆ (ಇ) ಕೈತಿರುಗಿಸುವುದು (ಈ) ಜಾತಕ

೪. ಮೈತ್ರಿ
(ಅ) [illegible] (ಆ) [illegible] (ಇ) [illegible] (ಈ) [illegible]

೫. ನಿಶಿತ
(ಅ) [illegible] (ಆ) [illegible] (ಇ) [illegible] (ಈ) [illegible]

೬. ಬೋಗರ
(ಅ) [illegible] ಪಾತ್ರೆ ಮಾಡುವವ (ಆ) [illegible] (ಇ) [illegible] ಹುಟ್ಟಿಸುವ (ಈ) [illegible]

೭. ಪಾಮರ
(ಅ) ತಿಳುವಳಿಕೆಯಿಲ್ಲದ (ಆ) ದುಂಬಿ (ಇ) ಬೀಸಣಿಗೆ (ಈ) ದಿವಾಳಿ ಎದ್ದವ

೮. ಪಾಪರ
(ಅ) ತಿಳುವಳಿಕೆ ಇಲ್ಲದ (ಆ) ದಿವಾಳಿ ಎದ್ದವ (ಇ) ದುಷ್ಕರ್ಮಿ (ಈ) [illegible]

೯. ವಿತಂಡವಾದ
(ಅ) ವಿರೋಧ (ಆ) ಅಸಂಬದ್ಧ ತರ್ಕ (ಇ) ನಿದ್ದೆ ಇಲ್ಲದಿರುವುದು (ಈ) ಬಲಾತ್ಕಾರ

೧೦. ಮೊಗ್ಗರ
(ಅ) ಜೊಗಸೆ (ಆ) ತುಂಬಿ ತುಳುಕುವಿಕೆ (ಇ) ಮಜ್ಜಿಗೆ (ಈ) ಸಮೂಹ

೧೧. ಪಾಸಲೆ
(ಅ) [illegible] (ಆ) [illegible] (ಇ) ಶುಲ್ಕ (ಈ) ಪಗಡೆಯ ದಾಳ

೧೨. ಕೈಮದ್ದು
(ಅ) ಕಹಿ ಔಷಧ (ಆ) ಸ್ಫೋಟಕ ದ್ರವ್ಯ (ಇ) ಸಾವಕಾಶ ಕೊಲ್ಲುವ ವಿಷ (ಈ) ಬಿರುಸು ಬಾಣ

## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ವೀಚಿ** (ಅ) ತೆರೆ, ಅಲೆ, ತರಂಗ. ಉದಾ:— ವಿಚಾರ ವೀಚಿ. [ಸಂ.]

೨. **ತಾರಸಿ** (ಈ) ಗಾರೆ ಅಥವಾ ಸಿಮೆಂಟಿನಿಂದ ಮಾಡಿದ ಚಪ್ಪಟೆ ಛಾವಣಿ. ಉದಾ:— ತಾರಸಿ ನೋಡುತ್ತ ಯೋಚಿಸಿದ. [ಇಂಗ್ಲಿಷ್-ಟೆರೇಸ್]

೩. **ತಾರತಮ್ಯ** (ಅ) ಹೆಚ್ಚು ಕಡಿಮೆ, ಮೇಲು ಕೀಳು, ವ್ಯತ್ಯಾಸ. ಉದಾ:— ತಾರತಮ್ಯವಿಲ್ಲದೆ ಎಲ್ಲರನ್ನೂ ನಂಬಬೇಡ. [ಸಂ. ತರ=ಮೇಲು+ತಮ=ಅತಿ ಮೇಲು-ಎಂಬುದರಿಂದ]

೪. **ಮೈತ್ರಿ** (ಇ) ಸ್ನೇಹ, ಗೆಳೆತನ, ಹೊಂದಿಕೆ. ಉದಾ:— ರಾಜಕಾರಣದ ಮೈತ್ರಿ ಶಾಶ್ವತವಲ್ಲ. [ಸಂ. ಮಿತ್ರ=ಸ್ನೇಹಿತ-ದಿಂದ]

೫. **ವಿಹಿತ** (ಇ) ಯೋಗ್ಯ, ಸಮರ್ಪಕ, ಸರಿಯಾದ; ಹೊಂದಿಸಿದ, ಕೂಡಿಸಿದ. ಉದಾ— ಸಮಸ್ಯೆಗೆ ವಿಹಿತವಾದ ಪರಿಹಾರ. [ಸಂ.]

೬. **ಬೋಗರ** (ಈ) ಠಕ್ಕುತನದ, ಸುಳ್ಳು, ಹುಸಿ. ಉದಾ:— ಬೋಗರ ದುಃಖದ ಮಾತು ಬೇಡ. [?]

೭. **ಪಾಮರ** (ಅ) ತಿಳಿವಳಿಕೆಯಿಲ್ಲದ, ಆಲೋಚನಾಶಕ್ತಿ ಇಲ್ಲದ, ಮೂಢ, ಅವಿದ್ಯಾವಂತ. ಉದಾ:-ಪಂಡಿತ ಪಾಮರರೆಲ್ಲರಿಗೂ ಮೆಚ್ಚಿಕೆಯಾಗಿದೆ. [ಸಂ ]

೮. **ಪಾಪರ** (ಆ) ದಿವಾಳಿಯಾದ, ತನ್ನ ಋಣಗಳನ್ನು ತೀರಿಸುವ ಶಕ್ತಿ ಇಲ್ಲವೆಂದು ನ್ಯಾಯಾಲಯದಲ್ಲಿ ನಿರ್ಧರಿಸಲ್ಪಟ್ಟ ಉದಾ:— ವ್ಯಾಪಾರದಲ್ಲಿ ಹಾನಿಹೊಂದಿ ಪಾಪರನಾದ. [ಇಂಗ್ಲಿಷ್-ಪ್ಪಾಪರ್]

೯. **ವಿತಂಡವಾದ** (ಅ) ಅಸಂಬದ್ಧ ತರ್ಕ, ವ್ಯರ್ಥ ವಾಗ್ವಾದ, ಹಾಗೂ ಅಲ್ಲ ಹೀಗೂ ಅಲ್ಲ ಎಂಬ ಕುತರ್ಕ, ಏನನ್ನೂ ಒಪ್ಪದ ಛಲ. [ಸಂ.]

೧೦. **ಮೊಗ್ಗರ** (ಈ) ಸಮೂಹ, ಗುಂಪು, ತಂಡ, ದಂಡು. ಉದಾ:— ಪುಂಡರ ಮೊಗ್ಗರ ದಾಳಿ. [ಕನ್ನಡ]

೧೧. **ಪಾಸಲೆ** (ಅ) ಆಸುಪಾಸು, ಸುತ್ತಮುತ್ತ, ಸಮೀಪ ಸ್ಥಾನ. ಉದಾ:— ಮನೆಯ ಪಾಸಲೆಯಲ್ಲಿ ಅರಣ್ಯ ತುಂಬಿದೆ. [ಹಿಂದೀ – ಪಾಸ್ – ಸಂ. ಪಾರ್ಶ್ವ]

೧೨. **ಕೈಮದ್ದು** (ಇ) ಸಾವಕಾಶ ಕೊಲ್ಲುವ ವಿಷ, ಸಿದ್ಧಿಯಾಗುವುದೆಂಬ ಭ್ರಮೆಯಿಂದ ಅರಿಯದಂತೆ ಆಹಾರದಲ್ಲಿ ಹಾಕುವ ವಿಷಮದ್ದು. [ಕನ್ನಡ]



### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |



"ಅಮ್ಮಾ, ತುಂಬಾ ಉರೀತಾಯಿದೆ, ತುರಿಸ್ತಾಯಿದೆ, ನೋಡಬಾರಮ್ಮ."

ನೈಸಿಲ್
ಬಳಸಿರಿ.
ಶೀಘ್ರ ಉಪಶಮನಕ್ಕಾಗಿ
ತ್ವಚೆ ಉರಿತದ ಪಾಡರ್.




2 ಬಗೆಯ
ಡಬ್ಬಿಗಳಲ್ಲಿ ಲಭ್ಯ
'ನೀಲಿ' ಮತ್ತು
'ಚಂದನ'.

ನೈಸಿಲ್ ತನ್ನಿರಿ
ತ್ವಚೆ ಉರಿತವನ್ನು
ಮರೆಯಿರಿ.



ಔಷಧಿಯುಕ್ತ ನೈಸಿಲ್:

1. ಹೆಚ್ಚಿನ ಬೆವರನ್ನು ತಡೆಯುತ್ತದೆ.
2. ಬೆವರನ್ನು ಹೀರಿಕೊಳ್ಳುತ್ತದೆ.
3. ದುರ್ವಾಸನೆ ಕೊಡುವ ಕ್ರಿಮಿಗಳನ್ನು ನಾಶಮಾಡುತ್ತದೆ.
4. ತ್ವಚೆಯನ್ನು ಸಂತವಿಸುತ್ತದೆ.

CASGLN-4 152 KAN

ದೊಡನೆ ಮನೆಗೆ ಹೋಗುವಂತೆ ಮಾಡಿದವು. ಈ ಕಥಾಸಂಕಲನ ಸಿಕ್ಕಿದ ಸ್ವಲ್ಪ ಸಮಯದಲ್ಲೇ ಡಾ. ಹಾ. ಮಾ. ನಾಯಕ ಅವರು ಶ್ರೀಮತಿ ರಾಜವಾಡೆಯವರ ಬಗ್ಗೆ ಕೆಲವು ಸಂಗತಿ ತಿಳಿಸಿದರು. ಅನಂತರ ಮಿತ್ರ ಸತ್ಯನಾರಾಯಣ ೧೯೪೪ರಲ್ಲಿ ಅಚ್ಚಾದ ರಾಜವಾಡೆಯವರ ಹನ್ನೆರಡು ಕಥೆಗಳ 'ಕದಂಬ' ಸಂಕಲನವನ್ನೂ ೧೯೩೮ರಲ್ಲಿ ಅಚ್ಚಾದ "ಪ್ರೇಮಪ್ರವಾಹ" ಎನ್ನುವ "ಅಂತರಂಗ" ಪತ್ರಿಕೆಯಿಂದ ಆಯ್ದ ಐದು ಕತೆಗಳ ಸಂಗ್ರಹವನ್ನೂ ಕೊಟ್ಟರು. ರಾಜವಾಡೆಯವರ ಕಥೆಯ ಹೆಸರೇ ಆ ಸಂಕಲನಕ್ಕೂ ಬಂದಿದೆ. 'ಆಹುತಿ'ಯ ಮುನ್ನುಡಿಯಲ್ಲಿ "ವಿಮಲೆ" ಎನ್ನುವ ಕಾದಂಬರಿಯನ್ನು ಪ್ರಕಟಿಸುವ ಉದ್ದೇಶ ಇದೆ ಎಂದು ಹೇಳಿದ್ದಾರೆ. ಇದು ಅಚ್ಚಾಗಿದೆಯೋ ಇಲ್ಲವೋ ನನಗೆ ತಿಳಿಯದು.

ನನಗೆ ಸಿಕ್ಕಿರುವ ಹದಿನೇಳು ಕತೆಗಳನ್ನೂ ಓದಿದ ಮೇಲೆ, 'ಗಿರಿಬಾಲೆ' ಎನ್ನುವ ಹೆಸರಿನಲ್ಲಿ ಬರೆದ ರಾಜವಾಡೆಯವರು ಐತಿಹಾಸಿಕ ಹಾಗೂ ಸಾಹಿತ್ಯಕ ದೃಷ್ಟಿಯಿಂದ ಕನ್ನಡದಲ್ಲಿ ಮುಖ್ಯರಾದವರು ಎಂದು ಅನ್ನಿಸಿತು.

'ಅರ್ಪಣೆ'ಯ 'ಆತ್ಮ ನಿವೇದನೆ'ಯ ಮಾತುಗಳಿಗೆ ತದ್ವಿರುದ್ಧವಾಗಿಯೋ ಎನ್ನಿಸುವಂಥ ವಸ್ತು ಹಾಗೂ ವಸ್ತುವಿನೊಟ್ಟಿಗೆ ಬರುವ ಧೋರಣೆ ರಾಜವಾಡೆಯವರನ್ನು ಗಮನಾರ್ಹ ಲೇಖಕಿಯನ್ನಾಗಿಸಿದೆ. ಬಹಳಷ್ಟು ಕತೆಗಳು ಕೌಟುಂಬಿಕ ಸಮಸ್ಯೆಗಳನ್ನು ಕುರಿತಾಗಿದ್ದರೂ ಅವುಗಳಲ್ಲಿ ಸಾಮಾಜಿಕ ಆಯಾಮವೂ ಸೇರಿಕೊಂಡಿದ್ದು ವ್ಯಂಗ್ಯ ಪ್ರಧಾನವಾದ ದೃಷ್ಟಿಕೋನ ಇವಕ್ಕೆ ಹೊಸ ಹರಹನ್ನು ಕೊಟ್ಟಿದೆ.

ಆರು ಭಾಗಗಳಲ್ಲಿರುವ 'ಆಹುತಿ' ಕತೆಯನ್ನೇ ನಾವು ನೋಡಬಹುದು. ಕತೆಯ ವಸ್ತು ಅದನ್ನು ಬೆಳಸಿರುವ ರೀತಿ, ಪ್ರತಿ ಭಾಗದ ಮೊದಲಲ್ಲೂ ಬರುವ ಸಂಸ್ಕೃತ, ಇಂಗ್ಲೀಷ್ ಸುಭಾಷಿತಗಳನ್ನು ನೋಡಿದರೆ ಸಾಂಪ್ರದಾಯಿಕ ಚೌಕಟ್ಟನ್ನು ಕತೆ ಎಲ್ಲೂ ಅತಿಕ್ರಮಿಸುವಂತೆ ಕಾಣಿಸುವುದಿಲ್ಲ. ಆದರೆ ಇಲ್ಲಿ ಕಂಡುಬರುವ ವ್ಯಂಗ್ಯ ಇಡೀ ಕತೆಯನ್ನೇ ನಾವು ಮತ್ತೆ ಮತ್ತೆ ಪುನರ್ಭಾವಿಸುವಂತೆ ಮಾಡುತ್ತದೆ. ನಾಗೇಂದ್ರ ಜೋಯಿಸರು, ನರಸಮ್ಮನವರಿಗೆ ಒಬ್ಬನೇ ಮಗನಾದ ನಾರಾಯಣ. ನಾರಾಯಣನ ಹೆಂಡತಿ ಲಕ್ಷ್ಮಿ. ಗಂಡ ಹೆಂಡಿರು ಅತ್ಯಂತ ಪ್ರೀತಿಯಿಂದ, ಇದ್ದಾರೆ. ಗಂಡ 'ಲಕ್ಷ್ಮೀ' ಎಂದು ಕರೆದರೆ ಈಕೆ 'ದೇವಾ' ಎನ್ನುತ್ತಾಳೆ. ನಾರಾಯಣ ಹೆಂಡತಿಯನ್ನು 'ಮುದ್ದು, ಮಾಣಿಕ್ಯ, ರಾಣಿ' ಎಂದು ಸಂಬೋಧಿಸುತ್ತಾನೆ; ಆಕೆಯೊಡನೆ ಪ್ರೀತಿಯಿಂದ ಚೆಲ್ಲಾಟವಾಡುತ್ತಾನೆ. ಆದರೆ ಅತ್ತೆ, ನರಸಮ್ಮ, ಹಾಗೂ ಮಾವ, ನಾಗೇಂದ್ರ ಜೋಯಿಸರಿಗೆ ಸೊಸೆ ಗೊಡ್ಡಿ, ವಂಶೋದ್ಧಾರಕನನ್ನು ಕೊಡಲಾರದವಳು ಎನ್ನುವ ಕೊರಗು ಕೋಪಕ್ಕೆ ತಿರುಗಿ, ಕಡೆಗೆ ಅವರು ಮಗನಿಗೆ ಬೇರೆ ಸಂಬಂಧ ನೋಡುತ್ತಾರೆ. ಅದು ತಿಳಿದ ತರುಣದಲ್ಲಿ ಲಕ್ಷ್ಮೀ ತನ್ನ ಪ್ರೀತಿಯ ಗಂಡನನ್ನು ಬಿಟ್ಟುಕೊಡಲಾರದ ದುಃಖದಿಂದ ಮಾನಸಿಕ ಆಘಾತಕ್ಕೆ ಈಡಾಗಿ ತನ್ನ ವಾಕ್‌ಶಕ್ತಿಯನ್ನು ಕಳೆದುಕೊಳ್ಳುತ್ತಾಳೆ. ಈಗ ನಾರಾಯಣನ ದುಃಖ ಹೇಳತೀರದು. ಕಡೆಗೆ, ಅವಳಿಗೆ ಮಾತನಾಡುವ ಶಕ್ತಿ ಮತ್ತೆ ಬಂದರೂ ಅದು ಗಂಡನನ್ನು ಮತ್ತೆ ಮದುವೆಗೆ ಒಪ್ಪಿಸಿ, ಸಾವನ್ನು ಸ್ವಾಗತಿಸಲು ಮಾತ್ರ ಸಹಾಯಕವಾಗುತ್ತದೆ. ನಾರಾಯಣ ಮತ್ತೆ ಮದುವೆಯಾಗುತ್ತಾನೆ. ಅವನ ಎರಡನೆಯ ಹೆಂಡತಿ ರಮಾ. ಈಕೆಯಿಂದ ಜೋಯಿಸರ ವಂಶ ಉದ್ಧಾರವಾಗುತ್ತದೆ. ರಮ ಗಂಡು ಮಗುವನ್ನು ಹೆರುತ್ತಾಳೆ. ಇದಾದ ಸ್ವಲ್ಪ ದಿನಗಳ ನಂತರ ನಾರಾಯಣ, ರಮ ಇಬ್ಬರೂ (ನಾರಾಯಣ ಲಕ್ಷ್ಮಿಯನ್ನು ಮತ್ತೆ ಸಂಧಿಸುವ ಬಯಕೆಯಿಂದ ಹಾಗೂ ರಮ ಗಂಡನ ಅನುವರ್ತಿಯಾಗಿ) ವಿಷ ಕುಡಿದು, ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಜೋಯಿಸರು ಮೊಮ್ಮಗನ ನಾಮಕರಣ ಸಂಭ್ರಮದಲ್ಲಿರುತ್ತಾರೆ. "ಹೋಮಕುಂಡದ ಹೊಗೆಯು ಮಾಯವಾಗಿದ್ದಿತು. ಆದರೆ ಬೆಂಕಿಯ ಕಣಗಳು ಬೂದಿಯೊಳಕ್ಕೆ ಅಡಗಿಕೊಂಡು ಇನ್ನೂ ಆರದೇ ಉಳಿದಿದ್ದುವು. ಕುಲನಿಧಿಯನ್ನು ಪಡೆಯಲು ಮಾಡಿದ ನಾಗೇಂದ್ರ ಜೋಯಿಸರ ಈ ಹೋಮದ ಆಹುತಿಯನ್ನು ಅಗ್ನಿಯು ಅತ್ಯಂತ ಆನಂದ

ಗಳೊಂದಿಗೆ ಕಥೆ ಮುಕ್ತಾಯವಾಗುತ್ತದೆ.

ಈ ಮೊದಲ ಕಥೆಯ ನಾಯಕನು ತಂದೆ-ತಾಯಿಗಳಿಗೆ ವಿಧೇಯ; ಅವರ ಆಸೆಯನ್ನು ಪೂರೈಸುವದಕ್ಕಾಗಿ ಎರಡನೆಯ ಮದುವೆ ಆಗುತ್ತಾನೆ, ಆದರೆ ಆಸೆಯನ್ನು ಪೂರೈಸಿ



ಕೊಡುವ ರೀತಿ ಮಾತ್ರ ಅತಿ ಕ್ರೂರವಾಗಿದ್ದು. ತಾನು ಆತ್ಮಹತ್ಯೆ ಮಾಡಿಕೊಳ್ಳುವುದಲ್ಲದೇ ರಮಣಿಯನ್ನೂ ಆತ್ಮಹತ್ಯೆ ಮಾಡಿಕೊಳ್ಳುವಂತೆ ಪ್ರೇರೇಪಿಸುತ್ತಾನೆ. ಆಕೆಯ ಪತಿವ್ರತಾ ಧರ್ಮವೇ ಮುಳುವಾಗುವಂತೆ ಅವಳಿಂದ ವಾಗ್ದಾನ ಪಡೆದು, ಆಕೆಯನ್ನು ಕೊಲ್ಲುತ್ತಾನೆ. ಈ ಕ್ರೌರ್ಯಕ್ಕೆ ಪೂರಕವಾಗಿ ರಾಜವಾಡೆಯವರ ವ್ಯಂಗ್ಯಾಂತ್ಯ ಬರುತ್ತದೆ.

'ಆಹುತಿ' ಕಥೆಯಲ್ಲಿರುವ ವ್ಯಂಗ್ಯ ಕ್ರೌರ್ಯಗಳು ರಾಜವಾಡೆಯವರ ಬರವಣಿಗೆಯ ಸಾಮಾನ್ಯ ಗುಣಗಳು. ಇವು ಹೆಚ್ಚು ಕಡಿಮೆ ಎಲ್ಲ ಕತೆಗಳಲ್ಲೂ ಕಾಣಬರುತ್ತವೆ. ಇವುಗಳ ಜೊತೆಗೆ ತುಂಬ ಭಾವುಕತೆ, ಮೆಲೋಡ್ರಾಮಗಳೂ ಇರುತ್ತವೆ. 'ಕಾಳಿ' ಕಥೆಯ ಹರಿಜನ ಹುಡುಗಿ ರಾಜಕುಮಾರನೊಬ್ಬನ ಪ್ರೇಮಕ್ಕೆ ಪಾತ್ರಳಾಗುವುದೇ ಒಂದು ಅತಿ ಭಾವುಕ ಸನ್ನಿವೇಶದಲ್ಲಿ. ಈ ಕಾಡಿನಲ್ಲಿ ಹುಲಿಯೊಂದು ಅವಳನ್ನು ಅಡ್ಡಗಟ್ಟಿದಾಗ ಆಕಸ್ಮಿಕವಾಗಿ ಬೇಟೆಗೆಂದು ಬಂದ ರಾಜಕುಮಾರ ತೇಜಸಿಂಹ ಅವಳನ್ನು ಉಳಿಸಲೆಂದು ಮುಂದೆ ಬರುತ್ತಾನೆ. ಆದರೆ ಕಾಳಿಯೇ ರಾಜಕುಮಾರನನ್ನು ಗಾಯಗೊಂಡ ಹುಲಿಯಿಂದ ರಕ್ಷಿಸುತ್ತಾಳೆ. ಹೀಗೆ ಪ್ರಾರಂಭವಾದ ರಮ್ಯ ಪ್ರೇಮ ಗಾಢವಾಗಿ ಬೆಳೆದು, ರಾಜಕುಮಾರ ಕಾಳಿಯನ್ನು ಅರಮನೆಗೆ ಕರೆತಂದುಕೊಳ್ಳುವವರೆಗೂ ಹೋಗುತ್ತದೆ. ಇಲ್ಲಿ ರಾಜಮಾತೆಯ ವಿರೋಧ ಬಂದು. ಕೊನೆಯಲ್ಲಿ ಕಾಳಿ ತನ್ನ ಪ್ರಿಯಕರನನ್ನು ತನ್ನ ಬಳಿಯೇ ಉಳಿಸಿಕೊಳ್ಳಲು ಅವನನ್ನು ಕುರುಡನನ್ನಾಗಿಸುತ್ತಾಳೆ; ನಂತರ. ಅವಳೇ ವಿಷಪ್ರಯೋಗಕ್ಕೆ ಈಡಾಗಿ ಸಾಯಬೇಕಾಗುತ್ತದೆ. ಈ ಕಥಾ ಸಂದರ್ಭದಲ್ಲಿ ತೇಜಸಿಂಹನ ಕೆಲವು ಮಾತುಗಳು ರಾಜವಾಡೆಯವರ ಮನೋಧರ್ಮವನ್ನೂ ಪ್ರಕಟಿಸುವಂತೆ ಕಾಣುತ್ತದೆ. "ನಿನ್ನೊಂದಿಗೆ ತರ್ಕ ಮಾಡಲು ನನಗೆ ಶಕ್ತಿಯಿಲ್ಲ. ಆದರೆ ಅಂತ್ಯಜರಿಗೆ ನಮ್ಮಂತೆ ಮನುಷ್ಯಾಕೃತಿಯಾದರೂ ಇದೆ ಯಷ್ಟೆ? ಮನುಷ್ಯ ಜಾತಿಯೆಂದ ಮೇಲೆ ನಮಗೂ ಅವರಿಗೂ ಸಂಬಂಧವಿದ್ದೇ ಇರುವುದು. ಅವರನ್ನು ಕೇವಲ ಪಶುವೃತ್ತಿಯಲ್ಲಿರಿಸುವುದು ಯಾವ ಧರ್ಮ! ನೀನು ಏನೇ ಹೇಳು, ಅಧಿಕಾರ

# ಭಾರೀ ಅವಕಾಶ!




## ಸೌತ್ ಇಂಡಿಯನ್ ಬ್ಯಾಂಕ್‌ನ ಸ್ವರ್ಣ ಮಹೋತ್ಸವ ಕ್ಯಾಷ್ ಸರ್ಟಿಫಿಕೇಟ್ ಕೊಂಡು ಲಾಭ ಪಡೆಯಿರಿ.

ಇದಕ್ಕೆ ಇದೇ ಸಾಟಿ. ಇಂಥ ಲಾಭದಾಯಕ ಅವಕಾಶ ಇನ್ನೊಂದಿಲ್ಲ. ನೀವು ಮಾಡ ಬೇಕಾಗಿರುವುದೆಲ್ಲಾ ಇಷ್ಟೇ: ನಿಮ್ಮ ಸಮೀಪದ ಸೌತ್ ಇಂಡಿಯನ್ ಬ್ಯಾಂಕ್‌ನ ಶಾಖೆಗೆ ಹೋಗಿ 5000/- ರೂ.ಗಳ ಗೋಲ್ಡನ್ ಜೂಬಿಲಿ ಕ್ಯಾಷ್ ಸರ್ಟಿಫಿಕೇಟ್ ಕೇಳಿರಿ. ಅದಕ್ಕೆ ಪ್ರತಿಯಾಗಿ ಕೇವಲ 2976 90 ರೂ ಗಳನ್ನು ಪಾವತಿ ಮಾಡಿರಿ. 63 ತಿಂಗಳ ನಂತರ ನಿಮ್ಮ ಈ ಪುಟ್ಟ ಮೊತ್ತ ಭಾರೀ ಮೊತ್ತವಾಗಿ ಬೆಳೆಯುವುದು. ಈ ಅವಕಾಶವನ್ನು ಕಳೆದುಕೊಳ್ಳಬೇಡಿ.




ರಿಜಿಸ್ಟರ್ಡ್ ಆಫೀಸ್ : ತ್ರಿಶೂರ್, ಕೇರಳ

**ಎಲ್ಲೆಲ್ಲೂ ನಿಮಗೆ ಸೇವಸಲ್ಲಿಸಲು ಬೆಳೆಯುತ್ತಿರುವ ಬ್ಯಾಂಕ್**

# ನಾನು ಮತ್ತು ನನ್ನ ಶತ್ರು ಪಕ್ಷ

ಮೂಲ ಮರಾಠಿ :

**ಪು. ಲ. ದೇಶಪಾಂಡೆ**

ಅನುವಾದ :

**ಎಸ್. ಬಿ. ನರಗುಂದಕರ**

ನನ್ನ ಶತ್ರು ಪಕ್ಷದವರಲ್ಲಿ ಇನ್ನೂ ಒಂದು ಅಜೇಯವಾದ ಬಣವಿದೆ– ಅದೆಂದರೆ, ಪ್ರವಾಸಕ್ಕೆ ಹೋಗಿ ಬಂದ ನಂತರ ಅಲ್ಲಿ ತೆಗೆದ ಫೋಟೋಗಳನ್ನು ತೋರಿಸುವವರದು ! ನೀರಲ ಹಣ್ಣು ಉದುರಿ ಆಯತ್ತಾಗಿ ಬಾಯಲ್ಲಿಯೆ ಬೀಳುವಂತೆ, ನಾನಾದರೂ ನೇರವಾಗಿ ಅವರ ಹಿಡಿತದಲ್ಲಿ ಸಿಕ್ಕುಬೀಳುತ್ತೇನೆ.

"ಏ, ನಾವು ಮೊನ್ನೆ ಹೋದ ಕಾಶ್ಮೀರದ ಆ ಅಲ್ಬಮ್ ತಗಿ, ನೋಡೋಣ."

ನನ್ನ ಕರುಳು ಕಿವುಚಿ ಹೊರಬಂದಂತಾಯಿತು. ಗೋಡೆಯ ಮೇಲಿನ ಗಡಿಯಾರದಲ್ಲಿ ಮೂರು ಗಂಟೆ ಬಾರಿಸುತ್ತಿತ್ತು. ಆದರೆ, ನನಗೆ ಅಲ್ಲಿ ನೂರು ಗಂಟೆಗಳು ಒಮ್ಮೆಲೆ ಬಾರಿಸಿದಂತೆ ಅನುಭವವಾಯಿತು. ಆಮೇಲೆ, ಆ 'ಏ' ಅಲ್ಬಮ್ ತಗೆದುಕೊಂಡು ಬಂದಳು.

"ಇದು ನಾವು ಹೊರಡುವಾಗ ಪುಣೆ ಸ್ಟೇಶನ್ನಿನಲ್ಲಿ ತಗೆದದ್ದು." ಇಲ್ಲಿಂದ ಸುರುವಾಗುವ ಪ್ರತಿ ಫೋಟೋದ ಪ್ರದರ್ಶನದೊಂದಿಗೆ ಸಂವಾದ ವಿವರಣೆಯೂ ನಡೆಯುತ್ತದೆ. ಶೀಘ್ರವಾದ ವಿವರಣೆಯಲ್ಲ. ಅದರಲ್ಲಿಯೆ 'ಏ' ಮತ್ತು 'ಅಲ್ರೀ' ನಡುವೆ ಮತಭೇದಗಳು ತಲೆದೋರುತ್ತಿರುತ್ತವೆ.

"ಇದು ಸೋಲನ್ ಮಾರ್ಗ"– 'ಅಲ್ರೀ' ಹೇಳುತ್ತಿದ್ದರು.

"ಅಯ್ಯಯ್ಯ, ಇದು ಸೋಲನ್ ಮಾರ್ಗಲ್ಲ– ಇದು ಗುಲಮಾರ್ಗ."– 'ಏ' ಹೇಳಿದಳು.

"ಏ, ಅಲ್ಲs, ನೀ ಇಲ್ಲೆ ಕುದುರಿ ಮ್ಯಾಲೆ ಕೂತಿದ್ದಿಲ್ಲೇನು? ಅಲ್ಲಿಂದ ಕುದುರಿ ಒಮ್ಮೆಲೆ ಕೆಳಗೆ ಕೂತಿತು." 'ಅಲ್ರೀ' ನುಡಿದರು.

"ಅದೆಂಥ ಕುದರಿ ಬಿಡ್ರಿ? ಹೆಣ ಆಗಿತ್ತು. ಅದು ಇಲ್ಲಿ ಅಲ್ಲ. ಹಾಗಾದದ್ದು ಟೋಲನ್ ಮಾರ್ಗದಲ್ಲಿ. ಇದು ಗುಲಮಾರ್ಗನೇ ಅದ. ನೀವು ಇಲ್ಲೇ ಕಾಲು ಜಾರಿ ಬೀಳಲಿಲ್ಲೇನು?"

(ಅಲ್ಲಿ ಬಿದ್ದ ಈ ಮನುಷ್ಯ ಏಕೆ ಎದ್ದ? ಹಾಗೇ ಏಕೆ ಬಿದ್ದುಕೊಂಡಿರಲಿಲ್ಲ? ಎಂದು ನಾನು ಯಥಾ ಪ್ರಕಾರ ಮನಸ್ಸಿನಲ್ಲಿಯೇ ಅಂದುಕೊಂಡೆ.)

"ಹಾದ್ಹಾದು – ಏನು ಬ್ಯೂಟಿಫುಲ್ ಅದ

ಅಂದರಿ – ಕಾಶ್ಮೀರದ ಹೂಗಳು ಇಷ್ಟು ಬ್ಯೂಟಿಫುಲ್ ಇರ್‍ತಾವ,"– 'ಅಲ್ರೀ.'

"ಇದು ಡಾಳಲೇಕ್," 'ಅಲ್ರೀ' ಹೇಳಿದರು.

"ಎಂಥ ಲೇಕು ?" ನಾನು.

"ಡಾಳ" ಮತ್ತೊಮ್ಮೆ 'ಅಲ್ರೀ' ಹೇಳಿದರು.

"ಡಾಳ ಅಲ್ಲs ಡಾಲ್, ಡಾಲ್"– 'ಏ' ದುರಸ್ತಿ ಮಾಡಿದಳು.

"ಇದು ಬದರಿ – ಕೇದಾರ ಹಾದಿ,"– 'ಅಲ್ರೀ' ಪುಟ ತಿರುವಿದನು. ನನಗೆ ಆ ಫೋಟೋದಲ್ಲಿ ಮಂಜು ಕವಿದಂತೆ ಕಾಣಿಸುತ್ತಿತ್ತು. ಇದು ಚಂದ್ರ ಲೋಕದಲ್ಲಿಯ ತಗ್ಗುಗಳ ಫೋಟೋ ಎಂದು ಹೇಳಿದ್ದರೂ ನಡೆಯಬಹುದಿತ್ತು.

"ಇದನ್ನ ನೋಡ್ರಿ"– ಆ ಫೋಟೋಲ್ಲಿಯ ಎರಡು ಕಪ್ಪು ಕಲೆಗಳನ್ನು 'ಅಲ್ರೀ' ತೋರಿಸಿದನು.

"ನೋಡೋಣ"–ಮಾಡುವದೇನು? ನೋಡಿದೆ.

"ಎಡಕಿನ ಕುದುರಿ ಮ್ಯಾಲೆ ನಾ ಇದ್ದೀನಿ, ಬಲಕಿನ ಕುದುರಿ ಮ್ಯಾಲೆ ಇಕೀ ಕೂತಾಳ."

ಆ ಫೋಟೋದ ಅಸ್ಸಲ್ ಕುದುರೆಗಳೇ ಕಾಣಿಸುತ್ತಿದ್ದಿಲ್ಲವೆಂದ ಬಳಿಕ ಆ ಅಸ್ಸಲ್ ಮೇಲಿನ ಬಡ್ಡಿಗಳು ಹೇಗೆ ಕಾಣಬೇಕು? ಆದರೆ, ಪ್ರವಾಸಿ ಫೋಟೋಗ್ರಾಫರರಿಗೆ ದಿವ್ಯ ದೃಷ್ಟಿ ಇರುತ್ತದೆ. ನಮಗೆ ಕಾಣದ್ದು ಅವರಿಗೆ ಕಾಣುತ್ತದೆ.

"ಇವು ಚಿನಾರದ ಮರಗಳು,"– 'ಅಲ್ರೀ.'

"ಅಲ್ರೀ, ಇದು ಅಕ್ರೋಟದ ಗಿಡ,"– 'ಏ'.

"ಹಾಂ, ಹೌದು, ನೀ ಅಂದ್ಹಾಂಗ ಇದು ಅಕ್ರೋಟ ಗಿಡಾನs ಹೌದು. ಕಾಶ್ಮೀರ–ದಿಂದ ಆ ಅಕ್ರೋಟ ಹೆಚ್ಚುವದು ತಂದೀವಲ್ಲ? ಅದನ್ನು ತೋರಿಸು ಇವರಿಗೆ."

ಅಲ್ಲಿಂದ, ಆಕೆ ಅಕ್ರೋಟು ಹೆಚ್ಚುವ ಕಾಶ್ಮೀರದ ಅಡಕೊತ್ತನ್ನು ತಗೆದುಕೊಂಡು ಬಂದಳು. ಮನೆಯಲ್ಲಿ ಅಕ್ರೋಟು ಇಲ್ಲದ್ದರಿಂದ (ನಮ್ಮಂಥ ಪಾಮರರು ಬಂದಾಗ ಅಕ್ರೋಟು ಏಕೆ ಒಂದು ಹೋಳು ಅಡಿಕೆ ಕೂಡ ಇರುವದಿಲ್ಲ.) ಜಾಜೀಕಾಯಿಯನ್ನೇ ಹೆಚ್ಚಿ ಪ್ರಾತ್ಯಕ್ಷಿಕೆಯನ್ನು ತೋರಿಸಲಾಯಿತು. ಪ್ರವಾಸಕ್ಕೆ ಹೋದವರು ಬರುವಾಗ್ಗೆ ಬೇಕುಬೇಕಾದ್ದನ್ನು ತರುತ್ತಾರೆ. ಯಾವ ವಂಶದ ಹಿಂದಿನ ಹದಿನೆಂಟು ತಲೆಮಾರಿನವರು ಮತ್ತು ಇನ್ನೂ ಮುಂದೆ ಹೊರಡಲಿರುವ ನೂರಾಯೆಂಟು ತಲೆಮಾರಿನವರು ಅಕ್ರೋ–ಟನ್ನು ತರುವದು ಎಂದೆಂದಿಗೂ ಸಾಧ್ಯವಿಲ್ಲವೋ ಅಂಥ ಆ ವಂಶದಲ್ಲಿಯ ಈ ಪ್ರಾಣಿಗಳು ಕಾಶ್ಮೀರದಿಂದ ಅಕ್ರೋಟು ಹೆಚ್ಚುವ ಅಡಕೊತ್ತನ್ನು ತಂದರೆ ಏನನ್ನಬೇಕು? ಲಕ್ಷ್ಮೀ ರೋಡ್, ಪುಣೆ, ಮತ್ತು ರಾನಡೆ ರೋಡ್, ಮುಂಬಯಿ–೨೮, ಈ ಪ್ರದೇಶಗಳಲ್ಲಿ ಪ್ರಪಂಚದಲ್ಲಿ ಸಿಗದೇ ಇರುವಂಥದ್ದೇನಿದೆ? ಹಾಗೆ ನೋಡಿದರೆ, ಪುಣೆ ಮತ್ತು ಮುಂಬಯಿ ಬಿಟ್ಟು ಜಗತ್ತಿನಲ್ಲಿ ನೋಡುವಂಥದೇನೂ ಇಲ್ಲ.

"ಇದು ನಾವು ಜೋಶಿ ಮಠದ ಒಂದು ಬಂಡೆಗಲ್ಲ ಮೇಲೆ ನಿಂತಾಗಿನ ಫೋಟೋ." ಆ ಫೋಟೋದಲ್ಲಿ ಹತ್ತು– ಹನ್ನೆರಡು ಜನರ ಒಂದು ಗುಂಪು ಇದ್ದಿತು, ಗಾಂಜಾದ ಕಳ್ಳ ಸಾಗಾಟ ಮಾಡುವವರು ಎಂದೊ ಅಥವಾ ಯಾವುದೇ ಒಂದು ಗ್ರಾಮ ಪಂಚಾಯತಿಯ ಸದಸ್ಯರು ತಮ್ಮ ಜಿಲ್ಹಾ ಕಾಂಗ್ರೆಸ್ ಕಮೀಟಿಯ ಅಧ್ಯಕ್ಷನೊಂದಿಗೆ ತಗೆಸಿಕೊಂಡ ಫೋಟೋ ಎಂದೊ ಅದನ್ನು ಕರೆಯಬಹುದಿತ್ತು.

"ನೀವು ಸ್ವಿಮಿಂಗ್ ಮಾಡೂವಾಗಿನ ಫೋಟೋ ತೋರಿಸಿರಿ ಅವರಿಗೆ," –'ಏ' ಫರ್ಮಾನ್ ಹೊರಡಿಸಿದರು.

"ಹೌದು."– 'ಅಲ್ರೀ' ಅವರು 'ಏ' ಅಂದದ್ದಕ್ಕೆಲ್ಲ ಮೊದಲು "ಹೌದು" ಎಂದೇ ತಮ್ಮ ಮಾತು ಸುರು ಮಾಡುತ್ತಿದ್ದರು. "ಹೌದು. ನೀ ಅದ್ಹಾಂಗ ಆ ಫೋಟೊ ಎಲ್ಲಿದ? ಈ ಅಲ್ಬಮದಾಗ ಕಾಣಿಸೂದಿಲ್ಲ."

"ಅಲ್ಬಮದಾಗ ಇರದಿದ್ರ ಅಲ್‌ಮೀರಾದಾಗ ಇರ್‍ತದ." ಈ ಮಾತಿನ ಮುಖ್ಯ ಉದ್ದೇಶ ತಮ್ಮಲ್ಲಿ ಅಲ್‌ಮೀರಾನೂ ಇದೆ ಎಂಬುದನ್ನು ನನಗೆ ತಿಳಿಸಬೇಕು ಎಂಬುದೇ ಆಗಿತ್ತು.) ಅಲ್‌ಮೀರಾ ತೆಗೆದು ಅದರಲ್ಲಿ ಆ ಆ ಫೋಟೋದ ಶೋಧ ನಡೆಯಿತು. ಅಲ್‌ಮೀರಾ, ಕಪಾಟು–ಗಳು, ಸೂಟ್–ಕೇಸಗಳು, ಹಳೆ ಟ್ರಂಕುಗಳು– ಹೀಗೆ ಆ ಫೋಟೋದ ಉತ್ಖನನ ಹಂತ ಹಂತವಾಗಿ ನಡೆಯಹತ್ತಿತು. ಈ ಪ್ರಾಪಂಚಿಕ ಉತ್ಖನನದಲ್ಲಿ ಒಂದು ವೈಶಿಷ್ಟ್ಯವಿರುತ್ತದೆ. ಇದರಲ್ಲಿ ನಮಗೆ ಬೇಕಾದುದೊಂದನ್ನು ಬಿಟ್ಟು

ಉಳಿದುದೆಲ್ಲ ಸಿಗುತ್ತವೆ. "ಅಲ್ರೀ ಇಲ್ನೋಡಿ ದ್ರೇನು? ಇದು ಹಳೆ ಅಲ್ಬಮು,– ಅಮೃತಾಂಜನ ಡಬ್ಬಿ ಇಲ್ಲೇ ಇತ್ತು ನೋಡ್ರಿ. ಎಲ್ಲಾ ಹೇರ್–ಪಿನ್ ಇಲ್ಲೇ ಅವ– ಮೊನ್ನೆ ಎಷ್ಟು ಹುಡುಕಾಡಿದೆ. ಇದು ನಿಮ್ಮ ಬೆಲ್ಟು–ಈಗs ಹಾಕೊಳ್ರಿ–" ದುರುಗಮುರಗಿಯ ಪೆಟ್ಟಿಗೆ ಯಲ್ಲಿನಂತೆ ಒಂದೊಂದೇ ಸರಕು ಹೊರಬೀಳ ಹತ್ತಿದವು. ಆದರೂ, 'ಅಲ್ರೀ'ಯವರ ಸ್ವಿಮಿಂಗ್ ಫೋಟೋ ದೊರೆಯುಲೊಲ್ಲದು.

"ನಾ ಅದನ್ನು ಹುಡುಕಿ ತಗೀತೀನಿ – ವ್ಯಾಲಿನ ಬ್ಯಾಗಿನೊಳಗ ಇರಬೇಕು – ಸ್ವಲ್ಪ ಸ್ಟೂಲ್ ತರತೀರೇನು?"

'ಅಲ್ರೀ' ಸ್ಟೂಲ್ ತಂದಿಟ್ಟನು. ಅದರ ಮೇಲೆ ಹತ್ತಿ ನಿಂತನು. ಮೇಲಿನ ಎಲ್ಲ ಬ್ಯಾಗುಗಳೂ ಕೆಳಗೆ ಬಂದವು.

"ಇದರಲ್ಲಿನ ಯಾವ ಬ್ಯಾಗಿನ್ಯಾಗ ಅದ? ಅಲ್ಲೀ ತನಕ ಈ ಇನ್ನೊಂದು ಅಲ್ಬಮ್ ನೋಡ್ರಿ," 'ಏ' ಸಲಹೆ ಕೊಟ್ಟಳು.

ಸನ್ನಿಹಿತವಾದ ಸಾವನ್ನು ನೋಡುವಂತೆ ನಾನು ಆ ಅಲ್ಬಮ್ ನೋಡಹತ್ತಿದೆ.

"ಇವ ನಮ್ಮ ಅಜ್ಜ."

ಅವ ಅಜ್ಜ, ಮತ್ತು ಇವ ಮೊಮ್ಮಗ. ಅಂದರೆ ಮೂರು ನಾಲ್ಕು ತಲೆಮಾರಿನ ಫೋಟೋಗಳನ್ನು ನಾನು ನೋಡಬೇಕಿತ್ತು.

"ಹೀಂಗೇನು?"

"ಅಂದರ, ಇವರು ನಮ್ಮ ತಂದೀ ತಂದಿ.

ನಮ್ಮ ತಾಯೀ ತಂದಿಯ ಫೋಟೋ ಇಲ್ಲ. ಅವರು ಫೋಟೋ ತಗಿಸಿಗೊಡ್ತಿದ್ದಿಲ್ಲ."

ಅವರ ತಾಯಿಯ ತಂದೆ ತುಂಬ ಸೂಜ್ಞರು ಎಂದೆನಿಸಿತು. ಅವರ ಆ ತಿಳುವಳಿಕೆ ಇಂದು ಎಲ್ಲರಲ್ಲಿ ಏಕೆ ಮಾಯವಾಗಿದೆ ಎಂದು ಖೇದವೂ ಆಯಿತು.

"ನಮ್ಮ ಅಜ್ಜ ಬಹಳ ಅಂತಃಕರಣದವರಿದ್ದರು." ಆ ಅಂತಃಕರುಣಿ ಅಜ್ಜನನ್ನು ನಾನು ಕಣ್ಣ ತುಂಬ ನೋಡಿದೆ. ಆ ಹರಡಿದ ಮೀಸೆಗಳಿಂದಾಗಿ ಆ ಅಜ್ಜ ಉಗ್ರವಾಗಿ ಕಾಣುತ್ತಿದ್ದರೋ ಅಥವಾ ಅವರ ಆ ತೇವುಗಣ್ಣುಗಳಿಂದಾಗಿ ಅಳಬುರುಕರಂತೆ ಕಾಣುತ್ತಿದ್ದರೋ— ಹೇಳುವದು ಕಠಿಣವಿತ್ತು. ಸರ್ಕಸ್ಸಿನಲ್ಲಿಯ ನೋಕರಿ ಹೋದದ್ದರಿಂದ ನಾಳಿನ ಹೊಟ್ಟೆಯ ಚಿಂತೆಯಲ್ಲಿದ್ದ 'ಹುಲಿ'ಯಂತೆ ಆ ಅಜ್ಜ ಕಾಣುತ್ತಿದ್ದರು.

"ಈ ಫೋಟೋದ ಗುರುತು ಹಿಡೀರಿ. ನೋಡೋಣ" ಈ ಉದ್ಗಾರಗಳು ನನ್ನನ್ನು ಎಚ್ಚರಗೊಳಿಸಿದವು. 'ತೋರಿಸಲಿಕ್ಕೆ' ಎಂಬ ಉದ್ದೇಶದಿಂದ ಉಪವರ ಕನ್ಯೆಗಳ ಫೋಟೋ ತಗೆಯುವ ಫೋಟೋಗ್ರಾಫರರ ಒಂದು ಪ್ರತ್ಯೇಕ ಜಾತಿಯನ್ನೇ ಭಗವಂತನು ಸೃಷ್ಟಿಸಿದ್ದಾನೆ. ಇದು ಅಂಥ ಜಾತಿಯವನೊಬ್ಬನು ತೆಗೆದ ಫೋಟೋ ಎಂಬ ಸಂಗತಿಯನ್ನು ನಾನು ತಟ್ಟನೆ ತಿಳಿದುಕೊಂಡೆ. ಆದರೆ, "ಗುರುತು ಹಿಡಿಯಿರಿ, ನೋಡೋಣ," ಎಂದಾಗ ಒಮ್ಮೆಲೆ ಗುರುತು ಹಿಡಿದುಬಿಡಬಾರದು; ಗುರುತು ಹಿಡಿಯದವರಂತೆ ನಟಿಸಬೇಕು. ವಿನಾಕಾರಣವಾಗಿ ಪಾಲಿಸಲಾಗುವ ಶಿಷ್ಟಾಚಾರಗಳಲ್ಲಿ ಇದೂ ಒಂದು. ಆದ್ದರಿಂದ ನಾನು ಬೇಕೆಂತಲೇ ಗುರುತು ಹಿಡಿಯದವನಂತೆ ನಟಿಸಿದೆ.

"ಮುಖ ಏನೋs ಪರಿಚಯದ್ದು ಕಾಣಸ್ತದ"— ವಾಸ್ತವಿಕವಾಗಿ ಆ ಮುಖ ಮೂರು ಮಡಿಕೆಯುಳ್ಳ ತನ್ನ ಗದ್ದವನ್ನು ಮುಂದೆ ಚಾಚಿ ಪತಿದೇವರ ಜಲಕ್ರೀಡಾ ಪ್ರಸಂಗದ ಛಾಯಾ ಚಿತ್ರವನ್ನು ಸಂದೂಕದ ಸಂದಿ ಗೊಂದಿಗಳಲ್ಲಿ ಶೋಧಿಸುತ್ತಾ ನನ್ನ ಸಮಕ್ಷಮವೇ ವಿರಾಜಮಾನವಾಗಿತ್ತು.

"ಗುರುತು ಹಿಡಿಯಿರಿ… ಪ್ರಯತ್ನಂತೂ ಮಾಡ್ರಿ."

"ಕಾನನ ಬಾಲಾಳ ಫೋಟೋ ಕಾಣಸ್ತದ." ಆ ಫೋಟೋ ಕಾನನಬಾಲಾಳದ್ದು ಎಂದು ಹೇಳಿದ ಕೂಡಲೆ 'ಅಲ್ರೀ' ಮತ್ತು 'ಏ' ಇಬ್ಬರೂ ನನ್ನ ಮೇಲೆ ತುಂಬ ಸಂತುಷ್ಟರಾದರು.

"ಕಾನನಬಾಲಾಳ್ಹಂಗ ಅನಿಸಿತು ಹೌದಲ್ಲೋ? ಮೊನ್ನೆ ನಮ್ಮ ಗಣಪತಿನೂ ಹಿಂಗೇ ಫಸಗೀ ಬಿದ್ದ. ಏ, ಅವ ಯಾರ್ಹಂಗೋ ಕಾಣಸ್ತದಂತ ಅಂದ್ನಲ್ಲs?"

"ವಹೀದಾ ರಹಿಮಾನಂತ ಏನೋ ಅಂದ್ರು." ಗದ್ದದ ಕೆಳಗೆ ಮೂರು ಮಡಿಕೆಗಳಿದ್ದ ಮಹಿಳೆಯೊಬ್ಬಳು ಎಷ್ಟು ಬಳುಕಬಲ್ಲಳೋ ಅಷ್ಟೇ ಬಳುಕುತ್ತ 'ಏ' ಹೇಳಿದರು.

ನನ್ನ ಮೊದಲೇ ಈ ಮನೆಗೆ ಗಣಪತಿ ಎಂಬ ಮಹಾ ಚತುರ ಪುರುಷನೊಬ್ಬನು ಬಂದು ಹೋಗಿದ್ದನೆಂಬುದು ನನ್ನ ಗಮನಕ್ಕೆ ಬಂದಿತು.

"ಅಂದರ? ಇದು ಕಾನನಬಾಲಾಳ ಫೋಟೋ ಅಲ್ಲೇನು?" ಎಂದು ನಾನು ಅತ್ಯಾಶ್ಚರ್ಯದ ಹಾವಭಾವಗಳನ್ನು ನಟಿಸುತ್ತ ಕೇಳಿದೆ.

"ಅಲ್ಲಾ! ಇದು ಇಕೀದs ಫೋಟೋ! ಲಗ್ನದ ಕಿಂತ ಮೊದಲ ತೆಗದದ್ದು! ಆಗ ಇಕಿ ಥೇಟ್ ಅಂದರ ಅಗದಿ ಕಾನನಬಾಲಾ ಅಥವ ದುರ್ಗಾ ಖೋಟೆನ್ಹಂಗs ಕಾಣಿಸುತ್ತಿದ್ದಳು."

ಈ ಇಬ್ಬರು ತಾಯಂದಿರೂ ಹೆಂಗಸರು ಎಂಬ ಒಂದು ಸಂಗತಿಯನ್ನು ಹೊರತುಪಡಿಸಿದರೆ, ಅವರಿಬ್ಬರಲ್ಲಿ ಉಳಿದ ಯಾವ ಸಾಮ್ಯಗಳನ್ನು ಈ 'ಅಲ್ರೀ' ಕಂಡುಕೊಂಡಿದ್ದನೋ ದೇವರೇ ಬಲ್ಲ.

"ಹೌದು, ಇಕೀದೆ – ಲಗ್ನದ ಮೊದಲಿನ ಫೋಟೋ ಆಗ She looked so ಏನ್ರೀ. exaclty like ಕಾನನಬಾಲಾ or ದುರ್ಗಾ ಖೋಟೆ."

"ಅದು ಹೋಗಲಿ – ಇದು ಯಾರ ಫೋಟೋ ಹೇಳ್ರಿ," ಸುಮಾರು ಎರಡು ವರ್ಷಗಳ ವಯಸ್ಸಿನ ಹುಡುಗನ – ಯಾವ ಹುಡುಗನನ್ನು ನೋಡಿದ ಕೂಡಲೆ ಅವನ ಕಪಾಳಕ್ಕೆ ಒಂದು ಬಿಗಿಯಬೇಕು ಎಂದು ಅನಿಸುವದೋ ಅಂಥ ಒಬ್ಬ ಹುಡುಗನ – ಫೋಟೋವನ್ನು 'ಅಲ್ರಿ' ನನ್ನ

ಕಣ್ಣೆದುರಿಗೆ ಹಿಡಿದನು.

“ಇಷ್ಟು ತಿಳಿಯೂದಿಲ್ಲೇನು ನನಗ? ಇದು ನಿಮ್ಮದೇ ಫೋಟೋ–” ಎಂದೆ ನಾನು.

“ಹೌದು – ಬರೋಬ್ಬರ ಗುರುತು ಹಿಡಿದಿರಿ. ಆಗ ನಾ ಎರಡು ವರ್ಷದಂವ ಇದ್ದೆ.”

“ಈಗಲೂ ನಿಮ್ಮಲ್ಲೆ ಅಷ್ಟೇನು ಬದಲಾದಂತೆ ಕಾಣುವದಿಲ್ಲ” ನಾನು ಸುಳ್ಳು ಪಳ್ಳೇ ಸೇಡು ತೀರಿಸಿಕೊಂಡೆ.

ಈ ಎಲ್ಲ ಶತ್ರುಗಳನ್ನು ಹೇಗೆ ಹತ್ತಿಕ್ಕಬೇಕು ಎಂಬುದು ನನಗೆ ಇನ್ನೂ ಹೊಳೆಯಲೊಲ್ಲದು, ಏನೇನೋ ಉಪಾಯಗಳನ್ನು ಮಾಡಿ ನೋಡುತ್ತೇನೆ; ಆದರೆ, ಉಪಯೋಗವಾಗುವದಿಲ್ಲ. ಯಾವ ಮನೆಯಲ್ಲಿಯ ಸುಪುತ್ರ–ಸುಕನ್ಯೆಯರಿಗಾಗಲಿ ಅಥವಾ ಸಾಕ್ಷಾತ್ ಆ ಮನೆಯ ಯಜಮಾನ–ಯಜಮಾನತಿಗೇ ಆಗಲಿ ಸಂಗೀತ–ನೃತ್ಯ ಮುಂತಾದವುಗಳ ಶಿಕ್ಷಣ ನಡೆದಿರುತ್ತದೋ ಅಂಥ ಮನೆಗಳನ್ನು ನಾನು ಮುದ್ದಾಮ್ ತಪ್ಪಿಸುತ್ತೇನೆ, ಬಾಲಕಲಾವಿದರ ಮಾತಾಪಿತೃಗಳು ನನ್ನ ಶತ್ರು ಪಕ್ಷದ ಪ್ರಬಲ ಪಾಳೆಯಗಾರರೆಂದೇ ನನ್ನ ಭಾವನೆ ಮತ್ತು ಅನುಭವ. ಅವರ ಆ ನಿಷ್ಪಾಪ ಅರ್ಭಕರೊಂದಿಗೆ ನನಗೆ ಯಾವ ವೈರತ್ವವೂ ಇಲ್ಲ. ಅವರ ಜನಕ–ಜನನಿಯರ ಅನುಪಸ್ಥಿತಿಯಲ್ಲಿ ನಾನಾಗಿಯೇ ಮುಂದಾಗಿ ಅವರ ಹಾಡುಗಳನ್ನು ಕೇಳಬಹುದು; ನೃತ್ಯಗಳನ್ನು ನೋಡಬಹುದು.

ಬೀದಿಯ ಮೇಲಿನ ಮಂದಿಯ ಗದ್ದಲವನ್ನು ಮೈತುಂಬ ಹೊದ್ದುಕೊಂಡು ನಾನು ಹೊರಟಿರುತ್ತೇನೆ. ನನ್ನ ಗೆಳೆಯ ಸೋನ್ಯಾ ಬಾಗಲಾಣಕರನ್ನೂ ಮಾಟುಂಗಾದಲ್ಲಿಯ ಒಂದು ಉಡುಪಿ ಅಂಗಡಿಯನ್ನು ಹೊಸದಾಗಿ ಹುಡುಕಿ ತಗೆದಿದ್ದಾನೆ. ಬೆಳಗಿನ ಎಂಟು ಗಂಟೆ ಸುಮಾರು ಅಲ್ಲಿ ದೊರೆಯುವ ಇಡ್ಲಿ–ಸಾಂಬಾರಕ್ಕೆ ಈ ತ್ರಿಭುವನದಲ್ಲಿಯೇ ಸರಿಸಾಟಿಯಿಲ್ಲ. ಆಗ ಕ್ಯೂ ಹಚ್ಚಬೇಕಾಗುತ್ತದೆ. ಪಾಪ ಸೋನ್ಯಾ ನನ್ನ ಸಲುವಾಗಿ ತನ್ನ ಟೊಪ್ಪಿಗೆ ಇಟ್ಟು ಒಂದು ಕುರ್ಚಿ ರಿಝರ್ವ್ ಮಾಡಿಕೊಂಡು ಕೂತಿರುತ್ತಾನೆ. ಅಷ್ಟರಲ್ಲಿಯೆ




‘ಪಕ್ಕದ್ಮನೆ ಗಂಡ ಹೆಂಡ್ತಿ ಕಾಲೇಜ್ನಲ್ಲಿ ಖ್ಯಾತ ಕ್ರೀಡಾಪಟುಗಳಾಗಿದ್ರಂತೆ....’

ವಿಧಿ ಬಂದು ನನ್ನ ಬೆನ್ನುತಟ್ಟುತ್ತದೆ. "ಪಾ, ಭೆಟ್ಟಿಯಾಗಿ ಎಷ್ಟು ದಿವಸ ಆತು–" ಯಾರನ್ನು ಭೆಟ್ಟಿಯಾಗಿ ಎಷ್ಟು ದಿವಸವಾಯಿತು ಎಂದು ಹೊರಳಿ ನೋಡುವಷ್ಟರಲ್ಲಿಯೆ ಅವನು ಸುರುಮಾಡಿ ಬಿಟ್ಟಿರುತ್ತಾನೆ.

"ಈ ಸಲ ಮಹಾಬಳೇಶ್ವರ ಜಂಗಲದಾಗ ಎರಡು ಪಾಂಥರುಗಳು ಅಡ್ಡ ಬಂದವು. ಸಾಹೇಬ ಅಂದರೇನಾಯಿತಂದಿss ಈ ಹುಲಿ ಬ್ಯಾಟಿ ಎಲ್ಲಾ ಬ್ಯಾಟಿಗಿಂತ ಬ್ಯಾರನೇ ಆತೇನಪಾ." ಕೂಟಯೋಧನು ಪರಿಸ್ಥಿತಿಯನ್ನು ತನ್ನ ಅಧೀನವಾಗಿಸಿಬಿಟ್ಟುಕೊಂಡಿರುತ್ತಾನೆ. ಮತ್ತು ನನ್ನ ಆಯುಷ್ಯದಲ್ಲಿಯ ಇನ್ನೊಂದು ಬೆಳಗು ಛಿದ್ರವಿಛಿದ್ರಗೊಳ್ಳಹತ್ತುತ್ತದೆ. ಶತ್ರು ಪಕ್ಷ ವಿಜಯೋನ್ಮಾದದಲ್ಲಿ ಮಾಯಗೊಂಡಾಗ ಬೆಳಗಿನ ಇಡ್ಲಿ–ಸಾಂಬಾರದ ಸಮಯವೂ ಸಂದಿರುತ್ತದೆ. ಇದಕ್ಕೆ ಒಂದೇ ಉಪಾಯವಿದೆ. ನಾವೇ ಸ್ವತಃ ಮನೆ ಕಟ್ಟಬೇಕು, ನಾವೇ ಸ್ವತಃ ಕಾಶ್ಮೀರ ಪ್ರವಾಸ ಅಲ್ಲಿ ಯಥೇಚ್ಛ ಫೋಟೊ ತೆಗೆದುಕೊಂಡು, ಬರಬೇಕು, ನಾವೇ ಸ್ವತಃ ನಮ್ಮ ಮಕ್ಕಳಿಗೆ ನೃತ್ಯ– ಸಂಗೀತಗಳ ಶಿಕ್ಷಣ ಕೊಡಬೇಕು, ಅಥವಾ ನಾವೇ ಸ್ವತಃ ನೃತ್ಯ ಸಂಗೀತಗಳನ್ನು ಕಲಿಯಬೇಕು, ನಾವೇ ಸ್ವತಃ ಹುಲಿ ಬೇಟೆ ಆಡಬೇಕು. ಆದರೆ, ಇದೆಲ್ಲ ಸಾಧ್ಯವೇ ಇಲ್ಲ. ಸರ್ವಶಕ್ತನಾದ ಭಗವಂತನು ಈ ಲೋಕದಲ್ಲಿ ಎರಡೇ ಎರಡು ಬಗೆಯ ಪ್ರಾಣಿಗಳನ್ನು ಹುಟ್ಟಿಸಿದ್ದಾನೆ. ಗೋಳಾಡುವವರು ಮತ್ತು ಗೋಳಾಡಿಸುವವರು. ನಮ್ಮದು ಮೊದಲನೇ ವರ್ಗ.

ಒಮ್ಮೊಮ್ಮೆ ಮೊಲಕ್ಕೂ ಸ್ಪಷ್ಟವಾಗಿ ಮಾತಾಡಿಬಿಡುವ ಮನಸ್ಸಾಗುತ್ತಿರಬಹುದು. "ಏ ಹುಲಿಯೇ, ರಾತ್ರಿ ಏಕೆ ಸುಮಸುಮ್ಮನೆ ಗುಡುಗು ಹಾಕುತ್ತೀ– ನಮ್ಮ ನಿದ್ರೆ ಕೆಡುತ್ತದೆ. ನಿನಗೆ ಏನೇ ಒದರುವದಿದ್ದರೂ ಹಗಲು ಹೊತ್ತಿನಲ್ಲಿ ಒದರಿಕೊ– ಇರುಳು ನಿನ್ನ ಗುಹೆಯಲ್ಲಿ ಸುಮ್ಮನೆ ನಾಯಿಯಂತೆ ಬಿದ್ದುಕೊಂಡಿರು–" ಹೀಗೆಂದು ಹುಲಿಗೆ ಹೇಳಿಬಿಡಬೇಕೆಂದು ಮೊಲಕ್ಕೂ ಅಷ್ಟೇ ಏಕೆ ಮೊಲಮ್ಮನಿಗೂ (ಈ ಶಬ್ದದ ಪುಲ್ಲಿಂಗ–ಸ್ತ್ರೀಲಿಂಗ ಏನೆಂಬುದನ್ನು ಒಮ್ಮೆ ಸ್ಪಷ್ಟ ಮಾಡಿಕೊಳ್ಳಬೇಕು) ಕೂಡ ಅನಿಸುತ್ತಿರಬಹುದು. ಆದರೆ, ಹಾಗೆ ಹೇಳಲು ಅದರಿಂದ ಎಂದೆಂದಿಗೂ ಆಗಲಾರದು. ಮೊಲದ ಕರುಳನ್ನು ಮೊದಲು ಅದರಲ್ಲಿ ಇರಿಸಿಯೇ ಭಗವಂತನು ಮೊಲವನ್ನು ಹುಟ್ಟಿಸಿದ್ದಾನೆ. ಮೊಲ ಹುಲಿಯನ್ನು ಹೆದರಿಸಿಕೊಂಡಿದ್ದರೆ, ಈ ಲೋಕವೇ ಬದಲಾಗುತ್ತಿತ್ತು ನಮ್ಮ ಎದೆಯಲ್ಲಿಯೂ ದೇವರು ಮೊಲದ ಕರುಗಳನ್ನೇ ಇಟ್ಟು ಕಳಿಸಿದ್ದಾನೆಂದು ತೋರುತ್ತದೆ. ನಮ್ಮ ಸೋನ್ಯಾ ಬಾಗಲಾಣಕರನ ಮಾತಿನಲ್ಲಿ ಹೇಳಬೇಕೆಂದರೆ,

"ಮಗನss ನಾವು ಹೀಂಗೇ ಸಾಯೂದದ ಏಸಪಾ, ಮಿರಚಿ ತಣ್ಣಗ ಆಗ್ತದ ನೋಡು–" ಆ ಉಡುಪಿ ಹೋಟೆಲ್ಲದಲ್ಲಿಯ ಮಿರಚಿಯನ್ನು ನಾನು ನನ್ನ ಯಾತನೆಗಳಿಗೆ ಬಾಡಿಸಿಕೊಂಡು ನುಂಗುತ್ತಿರುವಾಗ, ಕೂಟಯೋಧರಾದ ನನ್ನ ಶತ್ರು ಪಕ್ಷದವರ ಬಲಸಂವರ್ಧನೆ ಆಗುತ್ತಲೇ ನಡೆದಿರುತ್ತದೆ. ●



---

**ಬೇಗುದಿ**

ನಿನ್ನ ಬೆರಳ ಮಿಂಡಿತಕ್ಕೆ  
ನಾನಂ ವೀಣೆಯಾಗಂವೆ.  
ಆಗ–  
ನನ್ನ ಆಪಧ್ವಮನಿ  
ಅಭಿಧಮನಿಗಳಲ್ಲಿ  
ಸ ರಿ ಗ ಮ ಪ ದ ನಿ ಸ.

—ಸಿದ್ಧರಾಜ ಪೂಜಾರಿ

# ಸ್ವಚ್ಛ, ಆಹ್ಲಾದಕರ ಶ್ವಾಸ
# ಆರೋಗ್ಯಕರ, ಗಟ್ಟಿ ಹಲ್ಲುಗಳು

## ಕೋಲ್ಗೇಟ್ ಡೆಂಟಲ್ ಕ್ರೀಮ್‌ನ ಕೊಡುಗೆ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಇದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ– ಆಮೇಲೆ ನೋಯುವ ದಂತ ಕ್ಷಯವನ್ನುಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನಲ್ಲಿ ಆಹ್ಲಾದಕರವಾದ ಪೆಪ್ಪರ್‌ಮಿಂಟ್‌ನ ರುಚಿಯಿದೆ. ಆದ್ದರಿಂದ, ಅದರಿಂದ ಹಲ್ಲುಜ್ಜುವುದು ಆನಂದದಾಯಕವಾಗುತ್ತದೆ.

**ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ:**


ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.


ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.


ಫಲಿತಾಂಶ: ಆಕರ್ಷಕವಾದ, ಬಿಳುಪಾದ ಹಲ್ಲುಗಳು. ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

**ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ.**




DC.G.74 KN

ಗೆಳೆಯಾ,
ಹೀಗೊಂದು ಕಥೆ ಹೇಳುವೆ ಕೇಳಯ್ಯ
ಕೇಳಿಲ್ಲವೇ ಪುರಾಣ ಪುಣ್ಯಕಥೆ !
ಹಾಗೆಯೇ ಇದೂ ಒಂದು ಕಥೆ ಕಣಯ್ಯ
ನಡುರಾತ್ರಿಯ ಕಡುಂಗಲಿಗಳ ಕಥೆ
ಶೌರ್ಯ, ನೈರ್ಮಲ್ಯ ಶಾಂತಿ, ಸಮೃದ್ಧಿಗಳ ಕಥೆ
ಸ್ವಾತಂತ್ರ್ಯದ ಸವಿನೆನಪಿನ ಬಾವುಟದ ಕಥೆ !
ಬಣ್ಣಕೊಂದೊಂದು ಕಥೆ ಹೊತ್ತು ಹಾರುತ್ತಿದೆ
ನೋಡು ಗೆಳೆಯಾ
ಮೂರು ಬಣ್ಣದ ನಮ್ಮ ಬಾವುಟ !
ಮೊದಲು ಕೇಸರಿಗೆ ಸ್ಥಾನವಯ್ಯ :
ಏಕೆಂದರೆ ನಾವು ಪುರುಷಸಿಂಹರು !
ಮೇಲೆ ಕಂಡೀತು ಗೋಮುಖ
ಒಳಗುಂಟು ವ್ಯಾಘ್ರನಖ
ಕಥೆ ಕೇಳಯ್ಯ,
ಎಲೆ ಮರೆಯ ಕಾಯಂತೆ ಬೆಳೆವ
ಕೇಸರಿಗಳ ಕಥೆ.
ಸಮತೆ ಶಾಂತಿ ನಿರ್ಮಲತೆಗಳಿಗೆ
ಬಿಳಿಯ ಬಣ್ಣವೇ ಸಂಕೇತವಯ್ಯ :
ಒಂದೇ ನೆಲದ ನೂರುಕುಲದ
ಭಾರತೀಯರ ಭ್ರಾತೃತ್ವದ ಕಥೆ ಕೇಳಯ್ಯ;
ನಮ್ಮೊಳಗೆ ಕಚ್ಚಾಡಿದರೂ ಸರಿ,
'ವಿಶ್ವಶಾಂತಿಯೇ ಗುರಿ' ಎನ್ನುವ
ಶಾಂತಿ ದೂತರ ಕಥೆ;
ಕಲ್ಮಶಗಳೆಲ್ಲವ ಬಿಳಿಯ ಬಟ್ಟೆಯಲ್ಲಿ ಬಿಗಿವ
ಸ್ವಚ್ಛರು, ಸ್ವಚ್ಛಂದರು, ಪಾವನರ ಕಥೆ ಕೇಳಯ್ಯ
ಹಸಿರು ಬಣ್ಣವು ಸಮೃದ್ಧಿಗೆ ಸಾಕ್ಷಿ ನೋಡಯ್ಯ
ನಿತ್ಯ ಹಸಿರಾಗಿ ಬೆಳೆದ ಕೂಸುಗಳ
ಕರ್ಮ ಭೂಮಿಯ ಕಥೆ ಕೇಳಯ್ಯ;
ಹಸಿವ ಹೊಟ್ಟೆಯ ನಂಜೇರಿ ಹಸಿರಾದ ಕಥೆ
ಕೇಳಯ್ಯ ಸಮೃದ್ಧಿಯ ಕಥೆ !
ಈ ಕಥಾಪಥದಲ್ಲುರುಳುವ ಅಶೋಕ ಚಕ್ರದಡಿ
ಶೋಕಿಸುವ ಜನರ ಕ(ವ್ಯ)ಥೆ ಕೇಳಯ್ಯ
ಹೀಗೊಂದು ಕಥೆ.

ಮೂಲ:
ಮಿಲನ್ ಮುಖೋಪಾಧ್ಯಾಯ

ಕನ್ನಡಕ್ಕೆ:
ಗೀತಾ ವಿಜಯಕುಮಾರ

ಲೋಕಲ್ ಟ್ರೇನಿನಲ್ಲಿ ಬಲಗಡೆ ಕಿಡಿಕಿಯ ಬಳಿ ಕುಳಿತುಕೊಳ್ಳುವ ಯೋಗ ಲಭಿಸೋದು ಯಾರು ಮೊದಲು ಅತಿ ಸರದಿಂದ ಓಡಿ ಬಂದು, ತನ್ನ ಸ್ಥಳವನ್ನು ಕಾದಿರಿಸುತ್ತಾರೋ ಅಂಥವರಿಗೆ ಮಾತ್ರ ಲಭ್ಯ. ಪ್ರತಿದಿನ ಆ ಸ್ಥಳಕ್ಕಾಗಿ ಒಂದಿಬ್ಬರು ಪ್ರತಿಸ್ಪರ್ಧಿಗಳು ಇದ್ದೇ ಇರುತ್ತಾರೆ, ಕಾಯಂ ಆಗಿ. ಆ ಸ್ಥಳಕ್ಕಾಗಿ ಹೊಡೆದಾಡಲೇಬೇಕೆಂಬ ನಿಯಮವೇನಿಲ್ಲ. ಸಿಯಾಲ್ದಾ ಕಡೆ ಹೋಗುವ ಈ ಟ್ರೇನಿನ ಕಂಪಾರ್ಟ್‌ಮೆಂಟಿನಲ್ಲಿ, ಬಲ ಭಾಗಕ್ಕೆ ಒಟ್ಟು ಆರು ಕಿಡಿಕಿಗಳಿವೆ. ಕೇವಲ ಕಲ್ಯಾಣಿಯ ವರೆಗೆ ಮಾತ್ರ ಗಾಳಿ ಬರುತ್ತಿದ್ದುದು, ಮೊದಲ ಮೂರು ಕಿಡಿಕಿಗಳಲ್ಲಿ ಮಾತ್ರ. ಉಳಿದವು ತಿರುಗಿ ಸಿಯಾಲ್ದಾದಿಂದ ಹಿಂತಿರುಗುವಾಗ ಮಾತ್ರ. ಬೆಳಗಿನ ತೀಕ್ಷ್ಣವಾದ ಸೂರ್ಯಪ್ರಕಾಶ ಅಷ್ಟಾಗಿ ಬಾಧಿಸುತ್ತಿರಲಿಲ್ಲವಾದುದರಿಂದ, ಎಲ್ಲರಿಗೂ ಮೊದಲಿನ ಮೂರು ಕಿಡಿಕಿಗಳ ಮೇಲೆಯೇ ಆಸೆಗಣ್ಣು. ವೈಶಾಖದ ಸುವಾಸನೆ ಹೊತ್ತು, ಬೆಳಗಿನ ಗಾಳಿ ಮಂದವಾಗಿ ಬೀಸಿದರು ಕೂಡಾ ಬೆವರಿನಿಂದ ತೊಯ್ದಿರುತ್ತಿದ್ದ ಪ್ರಯಾಣಿಕರ ಮನಸ್ಸನ್ನು ಆಹ್ಲಾದಗೊಳಿಸಲು ಅದರಿಂದಲೂ ಸಾಧ್ಯವಾಗುತ್ತಿರಲಿಲ್ಲ.

ಇಂದು ಜಗಬಂಧುವಿನ ಅದೃಷ್ಟ ಖೋಟಾ ಆಗಿತ್ತು ಅಂತ ಕಾಣಿಸುತ್ತೆ. ಎಲ್ಲರೂ ಬಯಸುವ ಅಮೂಲ್ಯವಾದ ಬಲ ಭಾಗದ ಕಿಡಿಕಿಯ ಬಳಿಯ ಜಾಗ ಇಂದವನಿಗೆ ಲಭಿಸಲಿಲ್ಲ. ಅವನ ಆತ್ಮೀಯ ಸ್ನೇಹಿತರುಗಳಾದ ಪಂಚು, ಖಿರ ಘೋಷ ಹಾಗೂ ಖಗೇನ್‌ಬಾಬು ಈಗಾಗಲೇ ಆ ಮೂರು ಕಿಡಿಕಿಗಳನ್ನು ಆಕ್ರಮಿಸಿ ಚೆನ್ನಾಗಿ ಝಂಡಾ ಊರಿದ್ದರು. ಎಲ್ಲರೊಡನೆ ಆ ಸ್ಥಳವನ್ನಾಕ್ರಮಿಸಲು, ಜಗಬಂಧುವು ಮುಂದೆ ನುಗ್ಗಿದ್ದನಾದರೂ ತನ್ನ ಬಲಿಷ್ಠ ಎದುರಾಳಿಗಳನ್ನು ಪರಾಭವಗೊಳಿಸಲು, ಇಂದವನಿಂದ ಸಾಧ್ಯವಾಗಲಿಲ್ಲ. ಅಷ್ಟಾದರೂ ತನ್ನ ಒಂದಿಷ್ಟು ಏಳೆಂಟು ಜನರನ್ನು ತಳ್ಳಿಕೊಂಡು, ಹ್ಯಾಪ ಮೋರೆ ಹಾಕಿಕೊಂಡು, ಎಡ ಬದಿಯ ಕಿಡಿಕಿಯ ಬಳಿಯೇ ಬಂದು ಕುಳಿತುಕೊಂಡ. ತನ್ನ ಸ್ನೇಹಿತರ ವಿಜಯವನ್ನು ಅಸೂಯಾಪರ ದೃಷ್ಟಿಯಿಂದ ನೋಡದೇ ಇರಲು ಅವನಿಂದ ಸಾಧ್ಯವಾಗಲಿಲ್ಲ.

ಎಡ ಕಿಡಿಕಿಯ ಬಳಿ ಕುಳಿತ. ತನಗೆ ತಾನೇ ಆಗಬಾರದ್ದೇನಾಗಿಲ್ಲ ಎಂದು ಜಗಬಂಧು ಸಮಾಧಾನ ಮಾಡಿಕೊಂಡ. 'ಎಷ್ಟೋ ದಿನದ ನಂತರ. ತಾನೇ ನಾನಿಪತ್ತು ಬಲ ಭಾಗದ ಕಿಡಿಕಿಯನ್ನು ಬೇರೆಯವರಿಗೆ ಒಪ್ಪಿಸಿರೋದು.'

ಈಚೆಗೆ ಟ್ರೇನಿನಲ್ಲಿ, ಬೀಡಿ ಸಿಗರೇಟುಗಳನ್ನು ಸೇದಬಾರದೆಂಬ ನಿಷೇಧಾಜ್ಞೆ ಜಾರಿಯಲ್ಲಿದೆ. ಆಜ್ಞೆಯನ್ನು ಯಾರೊಬ್ಬರೂ ಉಲ್ಲಂಘಿಸುವುದೇ ಇಲ್ಲವೆಂದೇನಲ್ಲ, ಇಂದು ತಾನೇಕೆ ಧೂಮಪಾನಿಸಬಾರದು ಎಂಬ ಆಲೋಚನೆ ಜಗಬಂಧುವಿನ ಮನದಲ್ಲಿ ಮೂಡುತ್ತಿರುವಂತೆ, ಒಂದು ಬೀಡಿಯನ್ನು ಬಾಯಿಗಿಟ್ಟುಕೊಂಡ. ಹೊಟ್ಟೆ ತುಂಬಾ ಕವಳ ಮೆದ್ದ ಮೇಲೆ ಸಿಗರೇಟು ಸೇದದೆ ಇರೋಕೆ ಸಾಧ್ಯವೇ ಇಲ್ಲ. ತೀಕ್ಷ್ಣವಾದ ಸೂರ್ಯನ ತಾಪವನ್ನು ಕೂಡಾ ಲೆಕ್ಕಿಸದೆ, ಪಂಚು, ಖಿರ ಘೋಷರ ಕಡೆ ವಿಜಯದ ನಗೆ ಬೀರಿ ಅವರ ಹುಸಿನಗೆಯನ್ನು ಅಲಕ್ಷಿಸುವವನಂತೆ, ಒಳ್ಳೇ ಪಕ್ಕಾ ಕೇಡಿಯಂತೆ ಬಾಯಲ್ಲಿಟ್ಟುಕೊಂಡ ಬೀಡಿಗೆ ಜೇಬಿನಿಂದ ಬೆಂಕಿ ಪೆಟ್ಟಿಗೆ ತೆಗೆದು, ಕಡ್ಡಿ ಗೀರಿ ಹೊತ್ತಿಸಿದ. "ಕಲ್ಯಾಣಿ ತಲುಪುವತನಕ ಬೀಡಿ ಸೇದಲು ಆತಂಕವೇನಿಲ್ಲ. ಅಲ್ಲಿಂದ ಮುಂದೆ ನವಿರಾಗಿ ಬೀಸುವ ಗಾಳಿಯಲ್ಲಿ ಹಾಗೆ ಕಣ್ಣು ಮುಚ್ಚಿಕೊಂಡು ಹಗಲುಗನಸು ಕಾಣುತ್ತ ಪ್ರಯಾಣಿಸಿದರೆ, ಕೊನೆ ನಿಲ್ದಾಣದಲ್ಲೇ ಎಚ್ಚರವಾಗೋದು.

ಕಲ್ಯಾಣಿಯಲ್ಲಿ ಪುನಃ ಕಂಪಾರ್ಟ್‌ಮೆಂಟು ಜನರಿಂದ ತುಂಬಿತು. "ಸರಿರಪ್ಪಾ, ಒಳಗೆ ನಡೀರಿ! ದಾರಿ ಬಿಡಿ!" ಕೂಗು ಸತತವಾಗಿ ಕೇಳಿ

ಬಂತು. ಬಲ್ಲದ ಮನಸ್ಸಿನಿಂದಲೇ, ಜಗಬಂಧು ಕಾಲು ನಿರಿ ಸರಿದು ಕುಳಿತುಕೊಂಡು. ಸ್ಥಳ ತಾನು ಮಾಡಿಕೊಟ್ಟು, ಪುನಃ ಮೊದಲಿನ ಹಾಗೆ ಕಣ್ಣು ಮುಚ್ಚಿಕೊಂಡು ಕುಳಿತ. ಆದರೆ ಈಗ ಸೂರ್ಯನ ಪ್ರಖರತೆಯು ತೀಕ್ಷ್ಣ ಜಳ ಅದನ್ನು ಚುಚ್ಚಿ ಬಿಸಿಮಾಡುತ್ತಿತ್ತು. ಕಿಟಿ ಬಿಳಿಯಾಗ ಹಣೆಗಳಿಂದ ಧಾರಾಳವಾಗಿ ಬೆವ-ರಿಳಿಯುತ್ತಿತ್ತು. ಕಂಪಾರ್ಟ್‌ಮೆಂಟಿನಲ್ಲಿ ಜನ ತುಂಬಿತ್ತಂತೆ. ಒಂದು ನಮೂನೆಯ ಗಬ್ಬು ವಾಸನೆ ಗಾಳಿಯಲ್ಲಿ ತೇಲಿ ಬಂತು. ಜನರ ನೂಕು ನುಗ್ಗಲಲ್ಲಿ, ಕಾಲು ತುಳಿದು ರೆಪ್ಪು ಮುಂದಿಯೋ ತಮ್ಮ ಕೈಯಲ್ಲಿ ಹಿಡಿದ ವಸ್ತುಗಳನ್ನು ಬೇರೆ ಯಾರಿಗೆ ತಾಕಿಸುವವರೆಷ್ಟೋ ಎಲ್ಲಾ ಕಡೆಗೆ ಒಮ್ಮೆ ಕಣ್ಣು ಹಾಯಿಸಿ, ಜಗಬಂಧು ಪುನಃ ಕಣ್ಣು ಮುಚ್ಚಿಕೊಂಡ. "ಅಪ್ಪಪ್ಪಾ, ಇದನ್ನು ಸ್ವಲ್ಪ ಹಿಡ್ಕೊಳ್ಳಿ" ಕಾತರದ ಧ್ವನಿ ಹೊತ್ತು ಹೊತ್ತುಕೊಂಡಿದ್ದ ಕಪ್ಪಾದ ಸಪೂರ ಕೈ ಕಿಟಕಿಯ ಸರಳುಗಳಿಂದ ತೂರಿಬಂತು. ಅದ ಹಠಾತ್ತಾಗಿ. ಎಡಗೈಯಿಂದ, ಕಿಟಕಿಯ ಸರಳುಗಳನ್ನು ಹಿಡಿದಿದ್ದ. ಕಂದು ಬಣ್ಣದ ಕವರಿನ ಡಬ್ಬಿಯನ್ನು ತೂರಿಸಿದ ಕೈಯಲ್ಲಿ ಹಿಡಿದಿದ್ದ. ಜಗಬಂಧು, ತನ್ನೆಡೆ ತೂರಿಬಂದ ಕೈಗಳಿಂದ ಅದನ್ನು ಯಾಂತ್ರಿಕವಾಗಿ ಇಸಿದುಕೊಂಡ. ಅದೊಂದು ಟಿಫಿನ್ ಬಾಕ್ಸ್. ಟ್ರೇನು ನಿಲ್ದಾಣ ಬಿಡುವ ಸೂಚನೆಯಂತೆ ಜೋರಾಗಿ ಸೀಟಿ ಊದಿತು. ಚಕ್ಕನೆ ಟ್ರೇನು ನಿಲ್ದಾಣ ಬಿಟ್ಟು ಚಲಿಸಿತು. ಕ್ರಮೇಣ ತನ್ನ ವೇಗ ಹೆಚ್ಚಿಸಿ, ಸ್ಟೇಶನ್ ಬಿಟ್ಟು ಮುಂದೋಡಿತು. ಕಿಟಕಿಯ ಸರಳುಗಳನ್ನು ಹಿಡಿದಿದ್ದ ಕೈ ಇನ್ನೂ ಹಾಗೇ ಇತ್ತು. ಟ್ರೇನಿನಲ್ಲಿ ಈ ತರಹದ ಘಟನೆಗಳು ಸರ್ವಸಾಮಾನ್ಯ ಹೊಸದೇನಲ್ಲ. ಟಿಫಿನ್ ಬಾಕ್ಸ್ ಅಲ್ಲದಿದ್ದರೆ, ಮತ್ತಿನ್ನೇನೋ ಛತ್ರಿಯೊ, ಪುಸ್ತಕವೊ ಅಥವಾ ಇನ್ನೇನಾದರೂ ಕೈಯಲ್ಲಿ ಹಿಡಿಯುವ, ಸಾಮಾನುಗಳನ್ನು ಆಗಂತುಕ ಕೈಗಳು, ಕಿಟಕಿಯ ಸರಳುಗಳಿಂದ ನುಗ್ಗಿ, ಕಿಟಕಿಯ ಬಳಿ ಕುಳಿತ ಪ್ರಯಾಣಿಕನ ವಶಕ್ಕೊಪ್ಪಿಸಿ, ಪ್ರಯಾಣದ ಕೊನೆಯಲ್ಲಿ ಯಥಾಪ್ರಕಾರ ಟ್ರೇನು ಕೊನೆಯ ನಿಲ್ದಾಣದಲ್ಲಿ ಬಂದು ನಿಂತಾಗ, ಆಗಂತುಕ ಆ ವಸ್ತುವಿನ ಒಡೆಯ ತನ್ನ ವಸ್ತುವನ್ನು ಜೋಪಾನ ಮಾಡಿದವನಿಂದ ಕೃತಜ್ಞತೆಯಿಂದ ಹಿಂತಿರುಗಿ ಪಡೆಯುತ್ತಿದ್ದ. ಈ ರೀತಿ ಮನಸ್ಸಿನಲ್ಲಿಯೇ ಯೋಚಿಸುತ್ತ ಜಗಬಂಧುವಿನ ಕಣ್ಣು ಭಾರವಾದಂತಾಗಿ, ತಮ್ಮಷ್ಟಕ್ಕೆ ತಾವಾಗಿ ಮುಚ್ಚಿಕೊಂಡವು. ಡಬ್ಬಿ ಕೊಟ್ಟವನು, ಕೊನೆಯವರೆಗೂ ಒಳಬರಲು ಜಾಗವಿಲ್ಲದೆ ಅಲ್ಲೇ ಕಿಟಕಿ ಹಾಗೂ ಬಾಗಿಲ ಸರಳು ಹಿಡಿದು ಜೋಲಾಡುತ್ತ ಪ್ರಯಾಣಿಸುತ್ತಾನೋ ಏನೋ ಎನ್ನುವುದೇ ಜಗಬಂಧುವಿನ ಮನದಲ್ಲಿ ಪುನಃ ಅವನು ನಿದ್ರಾದೇವಿಯ ವಶವಾಗುವ ಮೊದಲು ಬಂದ ಆಲೋಚನೆ.

ಡಗ್-ಡಗಾ..ಡಗ್-ಡಗಾ.. ಟ್ರೇನು ವೇಗವಾಗಿ ಉಲ್ಲಾ ಹಾಂಗ್ ಬ್ರಿಡ್ಜಿನ ಮೇಲೆ ವೇಗವಾಗಿ ಸರಿದು ಹೋಯಿತು. ಟ್ರೇನು ಝಕ್ ಎಂದು ಕೊನೆಯ ನಿಲ್ದಾಣದಲ್ಲಿ ಬಂದು ನಿಂತಾಗಲೇ ಜಗಬಂಧುವಿಗೆ ಎಚ್ಚರವಾದದ್ದು. ಎಚ್ಚರವಾದೊಡನೆ ಅವನು ಮೊದಲು ಗಮನಹರಿಸಿದ್ದು, ತನ್ನ ತೊಡೆಯ ಮೇಲಿನ ಪ್ಯಾಕೆಟ್ ಮೇಲೆಯೇ. ಧಾರಾಳವಾಗಿ ಅವನ ಮೈಯಿಂದ ಬೆವರಿಳಿಯುತ್ತಿತ್ತು. ಕರವಸ್ತ್ರವನ್ನು ಕಿಸೆಯಿಂದ ಹೊರತೆಗೆದು ಕನ್ನಡಕದ ಗಾಜನ್ನೂ ಒರೆಸಿಕೊಂಡ. ತಮ್ಮ ಸಾಮಾನನ್ನು ಹಿಂದಿರುಗಿ ಪಡೆಯಲು ಆತ ಬಾರದೆ ಇರುವುದನ್ನು ಕಂಡು ಆ ಆಗಂತುಕನನ್ನು ಹುಡುಕುವವನಂತೆ ಕಂಪಾರ್ಟ್‌ಮೆಂಟಿನ ತುಂಬೆಲ್ಲ ಕಣ್ಣಾಡಿಸಿದ. ಆಗಲೆ ಪ್ರಯಾಣಿಕರು ಸ್ವಸ್ಥಳದಿಂದೆದ್ದು ಇಳಿಯಲು ಬಾಗಿಲ ಬಳಿ ಗುಂಪು ಸೇರತೊಡಗಿದ್ದರು. ಅಷ್ಟಾದರೂ ತನ್ನ ಟಿಫಿನ್ ಬಾಕ್ಸ್ ಪಡೆಯಲು ಆತ ಬರಲೇ ಇಲ್ಲವಲ್ಲ! ಟ್ರೇನಿನಿಂದಿಳಿದೊಡನೆ ಜನಕ್ಕೆ ಟ್ರಾಮೋ ಬಸ್ಸಿನ ಕಡೆಯೊ ಧಾವಿಸುವ ಅವಸರ. ಅಲ್ಲಿಂದ ಮುಂದೆ ತಮ್ಮ ನಿಗದಿಯಾದ ವೇಳೆಗೆ ಕಚೇರಿಯನ್ನು ತಲುಪಲೇಬೇಕು ಎನ್ನುವುದು ಎಲ್ಲರ ಗುರಿ. ಈಗಾಗಲೇ ಪಂಚು. ಏರ ಘೋಷರು ಇಳಿಯಲು ಇತರ ಜನರೊಡನೆ ಬಾಗಿಲ ಬಳಿಯ ಗುಂಪಿನಲ್ಲಿ ಒಂದಾಗಿ ನಿಂತಿದ್ದಾರೆ. ಕಿಟಕಿಯ ಸರಳುಗಳಿಗೆ ಮೂಗನ್ನೊತ್ತಿ ಜಗಬಂಧು, ಆ ಕಪ್ಪನೆಯ ಸಪೂರ ಮುಖದ ವ್ಯಕ್ತಿಗಾಗಿ ಹುಡುಕಾಡಿದ. ಅಲ್ಲೆಲ್ಲೂ ಆತನ ಸುಳಿವೇ ಇಲ್ಲ!

ಮನಸದಲ್ಲೇ ಜಗಬಂಧು ಆ ಆಗಂತುಕನನ್ನು ಬೈದು ಹಿಡಿ ಶಾಪ ಹಾಕಿದ. ಈಗಾಗಲೇ ಇಪ್ಪತ್ತು ವರ್ಷಗಳ ಮೇಲಾಯಿತೋ ಏನೋ ಜಗಬಂಧು ಮನೆಯಿಂದ ಆಫೀಸಿಗೆ ಟಿಫಿನ್ ಬಾಕ್ಸಿನಲ್ಲಿ ಊಟ ಒಯ್ಯುದು ಹಾಳಾದವ – ಆ ಕಪ್ಪು ಮುಸಡಿಯವ ಇಂದು ಪ್ರಯಾಣದುದ್ದಕ್ಕೂ ಈ ಟಿಫಿನ್ ಬಾಕ್ಸನ್ನು ರಕ್ಷಿಸುವ ಕಾರ್ಯವನ್ನೂ ಇವನಿಗೊಪ್ಪಿಸಿದ್ದ. ಕ್ಷಣಕ್ಷಣಕ್ಕೂ ಜಗದಾನ ಸಿಟ್ಟು ನೆತ್ತಿಗೇರುತ್ತಿತ್ತು. ತನ್ನಿಂದ ಎಷ್ಟು ಸಾಧ್ಯವೋ ಅಷ್ಟು ಆಗಂತುಕನನ್ನು ಬೈದ ತಕ್ಷಣ ಸ್ವಾಭಾವಿಕವಾಗಿಯೇ ಅವನ ಕಣ್ಣು ಟಿಫಿನ್‌ಬಾಕ್ಸಿನ ಕಡೆಗೆ ಹೊರಳಿತು. ಬಾಕ್ಸಿನೊಳಗಿನಿಂದ ಒಳ್ಳೆ ಘಮಘಮಿಸುವ ಅಡಿಗೆಯ ವಾಸನೆ ಹೊರಹೊಮ್ಮುತ್ತಿತ್ತು. ಆ ಪರಿಮಳ ಅವನ ಹಿಂದಿನ ನೆನಪನ್ನು ಕೆದಕಿತ್ತು. ಅದು ಕೇವಲ ಹಿಂದಿನ ಘಟನೆಗಳ ನೆನಪೊಂದೇ ಅಲ್ಲ, ಹಿಂದಿನದನ್ನು ನೆನೆಸಿಕೊಂಡು, ಬಾಯಲ್ಲಿ ನೀರು ಸುರಿಸುವಂತಹದು. ಹಿಂದೆ ಅಮ್ಮ ಅಡಿಗೆಯ ಮನೆಯ ಅಧಿಕಾರ ವಹಿಸಿಕೊಂಡಾಗಿನ ಕಥೆ ಆದರೆ ಅದೆಲ್ಲ ಈಗ ಕೇವಲ ನೆನಪು ಮಾತ್ರ! ಐವತ್ತೊಂದರ ಗಡಿಯಲ್ಲೀಗ ಜಗಬಂಧುವಿದ್ದಾನೆ. ಸದಾ ವಾಯುನೋವಿನಿಂದ ಬಳಲುತ್ತಿರುವ ಅವನ ಹೆಂಡತಿ ಸುಧಾಮಯಿ ಈಗ ನಲವತ್ತೆರಡರ ಅಂಚಿನಲ್ಲಿದ್ದಾಳೆ. ಬೇಗ ಬೆಳಗಾಗೆದ್ದು ಗಂಡನಿಗೆ ತಿಂಡಿ ಮಾಡಿ ಕಟ್ಟಿಕೊಡುವುದು ಅವಳಿಂದ ಸಾಧ್ಯವಾಗುವ ಕೆಲಸವೇನಲ್ಲ.

ತನ್ನ ನೌಕರಿಯನ್ನು ಜಗಬಂಧು, ಈಗಾಗಲೇ ಎರಡು ಸಲ ಬದಲಾಯಿಸಿದ್ದಾನೆ. ಘೋಷ ಆ್ಯಂಡ್ ಕಂಪೆನಿಯ ಲ್ಲಿ ಅವನು ಮೊದಲು ಕೆಲಸಕ್ಕಿದ್ದಾಗ, ಅವನ ತಾಯಿ ಬೇಗ ಬೆಳಗಾಗೆದ್ದು ಒಲೆ ಹೊತ್ತಿಸಿ, ಬಿಸಿ ಬಿಸಿ ರೊಟ್ಟಿ ಮಾಡಿ. ರೊಟ್ಟಿಗೆ ನಂಜಿಕೊಳ್ಳಲು ರುಚಿ ರುಚಿಯಾದ ಪಲ್ಯ. ಗೊಜ್ಜು ಮಾಡಿ. ಮಗನಿಗೆ ಡಬ್ಬಿ ಕಟ್ಟಿ ಕೊಡುತ್ತಿದ್ದಳು. ದಿನನಿತ್ಯ ಅಮ್ಮನ ಕೈ ಅಡಿಗೆ ಊಟ ಮಾಡಿಯೇ ಜಗಬಂಧು ಮನೆ ಬಿಟ್ಟು ಆಫೀಸಿಗೆ ಹೊರಡುತ್ತಿದ್ದದು. ದಿನಾ ಅಮ್ಮನನ್ನು "ಮಧ್ಯಾಹ್ನದ ಊಟಕ್ಕೆ ಡಬ್ಬಿಗೇನು ತುಂಬಿದ್ದೀಯಮ್ಮಾ?" ಎಂದು ಮರೆಯದೆ ಪ್ರಶ್ನಿಸುತ್ತಿದ್ದ. ಆದರೆ ಆಕೆಯಿಂದ ಅವನಿಗೆ ದಿನಾ ದೊರೆಯುತ್ತಿದ್ದ ಉತ್ತರ ಮಾತ್ರ ಒಂದೇ. "ನಿನಗೇ ಗೊತ್ತಾಗತ್ತಪ್ಪಾ, ಮಧ್ಯಾಹ್ನ ಡಬ್ಬಿ ತೆರೆದಾಗ ಅದರಲ್ಲಿ ಏನಿದೆ ಅಂತ ನೋಡುವಿಯಂತೆ." ಏನೋ ಒಂದು ರೀತಿಯ ಸಂಕೋಚಕ್ಕೊಳಪಟ್ಟು. ಡಬ್ಬಿಯ ರೊಟ್ಟಿ ಪಲ್ಯವನ್ನು ಗಬಗಬನೆ ಒಂದೇ ಉಸಿರಿಗೆ ತಿಂದು ಮುಗಿಸಿಬಿಡುತ್ತಿದ್ದ. ಮನಸ್ಸಿನ ಸಂಕೋಚ ಕ್ರಮೇಣ ಕಡಿಮೆ ಯಾದಂತೆ ಆಫೀಸಿನ ಶೇಕಡಾ ಎಪ್ಪತ್ತೈದರಷ್ಟು ಜನ, ಮನೆಯಿಂದ ದಿನಾ ತಮ್ಮ ಮಧ್ಯಾಹ್ನದೂಟ ತರುತ್ತಾರೆಂಬ ಸಂಗತಿ ಅರಿವಾಗಿತ್ತು. ಆಫೀಸಿನಲ್ಲಿ ಕೆಲವರು ತಮ್ಮ ಸ್ವಸ್ಥಾನದಲ್ಲೇ ಕುಳಿತು ಟಿಫಿನ್ ತಿಂದರೆ, ಮತ್ತೆ ಕೆಲವರು ಗುಂಪಾಗಿ ಕುಳಿತು, ಹರಟೆ ಹೊಡೆಯುತ್ತ ನಿಧಾನವಾಗಿ ತಿನ್ನುತ್ತಿದ್ದರು.

ಒಮ್ಮೆ ಒಂದು ಮಧ್ಯಾಹ್ನ, ಬಿಡುವಿನ ವೇಳೆಯಲ್ಲಿ ಬಿಮ್ಟು ಹಾಗೂ ಇನ್ನಿತರರು ಒಟ್ಟಾಗಿ ಕುಳಿತು ಊಟ ಮಾಡುವ ಗುಂಪಿನಿಂದ ಜಗಬಂಧುವಿಗೂ ಜತೆಯಲ್ಲಿ ಊಟ ಮಾಡಲು ಆಹ್ವಾನ ಬಂತು, ಎಲ್ಲರೂ ಒಬ್ಬರನ್ನೊಬ್ಬರು ಏನೇನು ತಂದಿದ್ದೀರ ಎಂದು ವಿಚಾರಿಸುವಾಗಲೇ ಮೆಲ್ಲನೆ ಜಗಬಂಧು ತಾನು ತಂದಿದ್ದ ಡಬ್ಬಿಯ ಮುಚ್ಚಳ ತೆಗೆದ. ಅಮ್ಮ ಅಂದು ಬೆಲ್ಲದ ಗೊಜ್ಜು, ಬೆಂಡೇಕಾಯಿ ಪಲ್ಯ, ರೊಟ್ಟಿ ಡಬ್ಬಿಯಲ್ಲಿ ತುಂಬಿ ಕಟ್ಟಿ ಕೊಟ್ಟಿದ್ದಳು. "ನಾನಿವತ್ತು ತಂದಿರೋದು ಇಷ್ಟೇ" ಎಂದು ಎಲ್ಲರಿಗೂ ಜಗಬಂಧು ತೋರಿಸಿದ. ಹರಟೆ ಹೊಡೆಯುತ್ತ, ಪರಸ್ಪರ ತಾವು ತಂದದ್ದನ್ನು ಹಂಚಿಕೊಂಡಾಗ, ಜಗಬಂಧುವಿನ ಡಬ್ಬಿಗೂ ಬಿಮ್ಟುವಿನ ಮೀನಿನ ಪಲ್ಯ, ಭೌಮಿಕನ ಮಾಂಸದ ತೊಕ್ಕು, ಸಚಿನನ ಸೊಪ್ಪಿನ ಪಲ್ಯ ಬಂದಿತ್ತು. ಅದೂ ಅಂದು ಎಲ್ಲರೊಡನೆ ಸೇರಿ ಹಂಚಿಕೊಂಡು ತಿಂದದ್ದು ಚೆನ್ನಾಗೇನೋ ಇತ್ತು. ಎಲ್ಲರ ಬಾಯಲ್ಲೂ ಜಗಬಂಧುವಿನ ಬೆಲ್ಲದ ಗೊಜ್ಜಿನ ರುಚಿಯದೇ ಚರ್ಚೆ.

ಹಿಂದಿನ ಘಟನೆಗಳ ನೆನಪಿನ ಸುಳಿಯಲ್ಲಿ ಸಿಕ್ಕಿಕೊಂಡ ಜಗಬಂಧುವಿನ ಹೃದಯ ಅದನ್ನು ಮೆಲುಕುಹಾಕಿ ಮೆಲ್ಲನೆ ತುಂಬಿ ಬಂತು. ಟಿಫಿನ್ ಬಗ್ಗೆ ಯೋಚನೆ ಬಂದಾಗ, ತನ್ನ ಕೈಯಲ್ಲಿರುವ ಆಗಂತುಕನ ಟಿಫಿನ್‌ಬಾಕ್ಸಿನೊಳಗೆ ಏನಿದೆಯೋ ನೋಡುವ ಎಂಬ ಕುತೂಹಲ ಉಂಟಾಯಿತು.

"ಏನಪ್ಪಾ! ಮತ್ತೆ ಅದೇ ರೈಲಿನಲ್ಲಿ ಕೂತು! ವಾಪಸ್ ಹೋಗಬೇಕು ಅಂತ ಮಾಡಿದೀಯಾ?" ಎಂಬ ಮಾತು ಕೇಳಿ ಜಗಬಂಧು ತಟ್ಟನೆ ಸ್ವಪ್ನ ಲೋಕದಿಂದ ವಾಸ್ತವಿಕಕ್ಕೆ ಬಂದ. ಟ್ರೇನಿನ ಕಂಪಾರ್ಟ್‌ಮೆಂಟು ಈಗಾಗಲೇ ಖಾಲಿಯಾಗುತ್ತ ಬಂದಿತು. ಕುತೂಹಲದಿಂದ ಖಗೇನ್‌ಬಾಬು ಇವನನ್ನು ದಿಟ್ಟಿಸಿ ನೋಡುತ್ತಿದ್ದ. ಜಗಬಂಧು ಏನಾದರೊಂದು ಉತ್ತರಿಸುವ ಮೊದಲೇ ಖಗೇನ್ ಪುನಃ, ಇದೇ "ರೈಲಿನಲ್ಲಿ ಕೂತ್ಕೊಂಡು ಹೋಗಕ್ಕೂ ಆಗಲ್ಲ, ಇದು ತಿರುಗಿ ಬಾರಾಸಾತ ಕಡೆ ಹೋಗುತ್ತಂತೆ. ಬೇಗ ಏಳು ತಡಮಾಡ ಬೇಡ!" ಎಂದು ಹೇಳಿ ಇಳಿಯಲು ಬಾಗಿಲ ಬಳಿ ಹೊರಟ. ಅಂತೂ ಕೊನೆಗೆ ಜಗಬಂಧು ತನ್ನ ಸ್ಥಳ ಬಿಟ್ಟೆದ್ದ. ಬೇರೆ ಪ್ರಯಾಣಿಕರುಗಳಾಗಲೆ ಸ್ಥಳ ಹಿಡಿಯಲು, ಟ್ರೇನು ಹತ್ತುತ್ತಿದ್ದರು. ಪುನಃ ಆ ಪ್ರಯಾಣಿಕರನ್ನು ಹೊತ್ತು ಟ್ರೇನು ಮುಂದೆ ಸಾಗುತ್ತೆ.

'ಆ ಮನೆಹಾಳ ಹೋದುದಾದರೂ ಎಲ್ಲಿಗೆ ? ಈಗಿನ ಕಾಲದ ಯುವಕರಿಗೆ ಬುದ್ಧಿಯೇ ಸ್ವಾಧೀನದಲ್ಲಿರೋದಿಲ್ಲ. ಬಡ್ಡೀಮಗ ಯಾವುದೊ ಒಳ್ಳೇ ಹಣ್ಣನ್ನು ಕಂಡಿರಬೇಕು, ಸರಿ ನಾಯಿ ತರಹ ನಾಲಿಗೆ ಹೊರಹಾಕಿ ಜೊಲ್ಲು ಸುರಿಸ್ತಾ ಅವ ಳನ್ನೇ ಹಿಂಬಾಲಿಸಿರಬೇಕು. ಮನುಷ್ಯನಾದ ರೊಬ್ಬರು ಅಲ್ಲಿ ನನ್ನ ಟಿಫಿನ್ ಬಾಕ್ಸ್ ಇಟ್ಟುಕೊಂಡು ನನಗಾಗಿ ಕಾಯುತ್ತಾ ಇದ್ದಾರೆ ಅನ್ನೋ ಪರಿ ಜ್ಞಾನವಾದ್ರೂ ಬೇಡವೆ ?' ಪುನಃ ಟ್ರೇನು ನಿಲ್ದಾಣ ಬಿಡುವ ಸೂಚನೆ, ಜೋರಾಗಿ ಸಿಟಿ ಊದಿದ ಶಬ್ದ ಕೇಳಿ ಬಂತು. ಖಗೇನ್ ಜೋರಾಗಿ ಕಿರುಚಿಕೊಂಡ, "ಮಾರಾಯಾ, ಬೇಗ ಮೊದಲು ರೈಲಿನಿಂದಿಳಿಯಪ್ಪಾ. ಆಮೇಲೆ ನಿದ್ದೆಮಾಡು ಬೇಕಂತೆ, ಇಲ್ಲದಿದ್ದರೆ ರೈಲು ಮುಂದೆ ಹೋದಾಗ ದಾರಿಯ ಕಂಭ ಗಿಂಭ ತಾಕಿ ಚಿರನಿದ್ರೆಯಲ್ಲೇ ಇರಬೇಕಾಗುತ್ತೆ !" ಜೋರಾಗಿ ನಗುತ್ತಾ ಅವನು ಆ ರೀತಿ ಹೇಳಿದಾಗ, ಎಲೆಯಡಿಕೆ ತಿಂದು ತಿಂದು ಕಪ್ಪಾದ ಅವನ ಹಲ್ಲುಗಳು ವಕ್ರವಾಗಿ ಕಂಡವು.

ಜಗಬಂಧು ಅಂತೂ ಕೊನೆಗೆ, ಬೇಗ ಇಳಿದ. "ಅದ್ಯಾವನೋ ಒಬ್ಬ ರೈಲಿನಡಿ ಬಿದ್ದಿದ್ದನ್ನು ನೀನು ನೋಡ್ಲೇ ಇಲ್ವೇನಯ್ಯಾ?" ಎಂದ ಖಗೇನ್ ಜಗಬಂಧು ಇಳಿಯುತ್ತಿದ್ದಂತೆ.

"ಎಲ್ಲಿ? ಯಾರು?" ಪುನಃ ಆ ವ್ಯಕ್ತಿಗೋಸ್ಕರ ಹುಡುಕುತ್ತ ಜಗಬಂಧು ಸ್ನೇಹಿತನನ್ನು ವಿಚಾರಿಸಿದ.

"ಎಲ್ಲಿ ಅಂದ್ರೇನು? ನಿನಗಿನ್ನೂ ನಿದ್ದೆ ಮಂಪರು ಪೂರ್ತಿ ಹರಿದಿದೆಯೋ ಇಲ್ವೋ ! ಯಾವ ಸ್ವಪ್ನಲೋಕದ ವಿಹಾರಕ್ಕೆ ಹೋಗಿದ್ದಿ?"

"ಛೆ ! ಹಾಗೇನಿಲ್ಲ. ಏನೋ ಸ್ವಲ್ಪ ಜೋಂಪು ಹತ್ತಿತ್ತು ಅಷ್ಟೆ. ನೀನು ಏನಂದೆ? ಯಾರಿಗೇ ನಾಯ್ತು?" ಈಗವನ ಧ್ವನಿಯ ಲ್ಲಿ ಗಾಬರಿ ಇತ್ತು.

"ಜಾರಡು ಬಿಟ್ಟ ಮೇಲೆ ಯಾವನೋ ಬಾಗಿಲ ಬಳಿ ಜೋತಾಡ್ತಾ ಇದ್ದವನಿಗೆ, ಎಲೆಕ್ಟ್ರಿಕ್ ಕಂಬ ತಗಲಿತ್ತಂತೆ. ಕೆಳಗೆ ಬಿದ್ದನು ಮೇಲೇಳಲೇ ಇಲ್ಲವಂತೆ. ನಾನೇನವನ್ನೆಲ್ಲ ಕಣ್ಣಾರೆ ನೋಡಿಲ್ಲ. ಅಬ್ಬಬ್ಬಾ! ತುಂಬಾ ಭೀಕರವಾಗಿತ್ತಂತೆ. ಆದ್ರೂ ಕೊ ಏನೋ ಯಾರಾದ್ರೂ ಬಿದ್ದು ಎದ್ದು ಮಾಡಿದಾಗ ಉಂಟಾಗುವ ಗಲಭೆ ಗದ್ದಲ ಯಾವುದೂ ಇವತ್ತು ಕೇಳಿ ಬರಲೇ ಇಲ್ಲ. ಬಹುಶಃ ಅದಕ್ಕೇ ಏನೋ ನಿನಗೆ ಗೊತ್ತಾಗಿಲ್ಲ. ಜನಾ ಬೇರೆ ಜಾಸ್ತಿ ಇದ್ರು." ಇಷ್ಟು ವಿಷಯ ಹೇಳಿ ಜಗಬಂಧುವಿನ ಕಡೆ ಪ್ರಶ್ನಾರ್ಥಕವಾಗಿ ನೋಡಿದ.

ಗರಬಡಿದವನಂತೆ ಜಗಬಂಧು ತಟಸ್ಥನಾಗಿ ನಿಂತೇಬಿಟ್ಟಿದ್ದ. ಅವನ ತಲೆ ಸಿಡಿಯುತ್ತಿತ್ತು. ಒಂದು ವೇಳೆ ಆ ಬಿದ್ದವನೇ ಟಿಫಿನ್ ಬಾಕ್ಸಿನ ಒಡೆಯನಾಗಿದ್ದರೆ !

ಖಗೇನ್ ಪುನಃ ತಾನು ಅರ್ಧಕ್ಕೆ ನಿಲ್ಲಿಸಿದ್ದ ಸುದ್ದಿಯ ವಿವರವನ್ನು ಮುಂದುವರಿಸಿದ. "ಈ ಮಹಾ ಸಮುದ್ರದಲ್ಲಿ, ಇದೇ ರೀತೀನೇ ಆಗೋದು. ಪ್ರತಿಯೊಬ್ನೂ ತನ್ನದನ್ನು ತಾನು ನೋಡ್ಕೋತಾನೆ. ಅಪಘಾತವನ್ನು ಎಷ್ಟು ಜನ ಕಣ್ಣಿಂದ ಕಂಡಿಲ್ಲ? ಮುಂದುವರೆದು ಅವರಲ್ಲಿ, ಮುಂದೆ ಹೋಗಿ ಸಹಾಯ ಮಾಡಿದವರು ಒಬ್ಬರೂ ಇಲ್ಲ. ಎಲ್ಲರಿಗೂ ಅವರವರ ಕೆಲಸ ಹೆಚ್ಚು. ಇಲ್ಲಿ ತಡವಾದ್ರೆ, ಅಲ್ಲಿ ಆಫೀಸಿನಲ್ಲಿ ಪರ್ಸೊನೆಲ್ ಆಫೀಸರನ ಕೈಯ ಲ್ಲಿ ಬೈಸಿಕೊಳ್ಳ ಬೇಕು. ಅಷ್ಟರಲ್ಲೇ ಯಾರೋ ಒಬ್ಬರು ಕೈನು ಹಿಡಿದೆಳೆಯಲು ಪ್ರಯತ್ನಪಟ್ಟರಂತೆ. ಅದೇನೂ ಫಲಕಾರಿಯಾಗಲಿಲ್ಲ. ಬಹುಶಃ ಹಾಳಾದ ಕೈನು ತುಕ್ಕು ಹಿಡಿದಿರಬೇಕು, ಇಲ್ಲವೆ ಅವನೇ

ಜೋರಾಗಿ ಎಳೆದಿರಲಿಕ್ಕೂ ಇಲ್ಲ." ಇಷ್ಟೆಲ್ಲ ವಿವರ ಹೇಳಿದರೂ ಜಗಬಂಧುವಿನಿಂದ ಯಾವುದೊಂದೂ ಪ್ರತಿಕ್ರಿಯೆ ಬಾರದುದನ್ನು ಕಂಡೂ ಖಗೇನ್ ಮಾತು ಮುಂದುವರಿಸದೆ ಅರ್ಧಕ್ಕೆ ನಿಲ್ಲಿಸಿಬಿಟ್ಟ.

"ಇವತ್ತೇನು ಆಫೀಸಿಗೆ ಹೋಗಲ್ವ! ಇಲ್ಲೇ ಇಷ್ಟು ನಿಧಾನ ಮಾಡ್ತಾ ಇದೀಯಲ್ಲ," ಖಗೇನ್ ಸ್ನೇಹಿತನನ್ನು ಎಚ್ಚರಿಸಿದ.

"ಇಳಿಯೋವಾಗಂದೆ, ಪಕ್ಕಿ ಹಿಡ್ಕೊಂಡುಬಿಟ್ಟಿದೆ ಅದಕ್ಕೆ ನಿಧಾನ ಮಾಡ್ತಾ ಇದೀನಿ. ಸ್ವಲ್ಪ ಸುಧಾರಿಸಿಕೊಂಡ್ರೆ ಸರಿ ಹೋಗುತ್ತೆನೋ ನೋಡ ಬೇಕು." ಜಗಬಂಧು ಸ್ನೇಹಿತನ ಬಾಯಿ ಮುಚ್ಚಲು ಸಬೂಬು ಹೇಳಿದ.

ಟ್ರೇನು ಪ್ಲಾಟಫಾರಂ ಬಿಟ್ಟು ಹೊರ ಹೊರ ಟಿತು. "ನೀನು ಸುಧಾರಿಸಿಕೊಂಡು ಬಾ. ನನಗಿನ್ನು ತಡವಾಗುತ್ತೆ. ನಾನಿನ್ನು ಬರ್ತೀನಿ" ಎಂದು ಖಗೇನ್ ಅವಸರವಸರವಾಗಿ ಹೆಜ್ಜೆ ಹಾಕುತ್ತ ತನ್ನ ಕೊರಳಲ್ಲಿ ಕೊಡೆ ಸಿಕ್ಕಿಸಿ, ಕೈಯಲ್ಲಿ ಪಂಜೆಯ ಚುಂಗನ್ನು ಮೇಲೆತ್ತಿ ಹಿಡಿದು ಸರಸರ ಹೆಜ್ಜೆ ಹಾಕಿದ.

ಜಗಬಂಧು ಇನ್ನೂ ಅದೇ ರೀತಿ ನಿಂತೇ ಇದ್ದ. ಕೈಯಲ್ಲಿದ್ದ ಟಿಫಿನ್ ಬಾಕ್ಸನ್ನು ಜಗಬಂಧು ಎಲ್ಲಾ ಕಡೆ ತಿರುಗಿಸಿ ನೋಡಿದ ಬಹುಶಃ ಅದರ ಮೇಲೇನಾದ್ರೂ ಹೆಸರು ಬರೆದಿದೆಯೋ ಎಂದು ಡಬ್ಬಿಯ ಮೇಲೆ ಯಾವುದೋ ಕಂದುಬಣ್ಣಕ್ಕೆ ತಿರುಗಿದ ವೃತ್ತಪತ್ರಿಕೆಯ ಜಾಹೀರಾತಿನ ಭಾಗವನ್ನು ಅಂಟಿಸಿತ್ತು. ಚೆಂದೊಳ್ಳೆ ಹೆಣ್ಣಿಗೆ ವರ ಬೇಕು. ನಂಬಿಕಸ್ತ ಟೈಪಿಸ್ಟ್ ಬೇಕಾಗಿದ್ದಾರೆ ಎಂಬ ಹಲವಾರು ಜಾಹೀರಾತಿನ ಭಾಗ ಮಾತ್ರ ಅದರಲ್ಲಿ ಕಂಡುಬಂತೇ ವಿನಾ ಹೆಸರಿನ ಅಂಶವೇ ಇಲ್ಲ.

ಖಗೇನ್ ಬಾಬು ಹೇಳಿದ್ದಾದ್ರೂ ಏನು? ಖಾರ ದಾದಲ್ಲಿ ಬಿದ್ದು ಬಿಟ್ಟನೆ? ಬಿದ್ದವನಿಗೆ ಜೋರಾಗಿ ಪೆಟ್ಟು ಬಿದ್ದಿರಬೇಕು. ಮೃದುವಾದ ಹಣೆಯ ಭಾಗ ಹಣೆಗೆ ಅಪ್ಪಳಿಸಿದ ವಿಷಯ ಕೇಳಿದರೇನೆ ರಕ್ತ ಹೆಪ್ಪುಗಟ್ಟುತ್ತೆ. ಹರಿಯುವ ರಕ್ತದ ಕೋಡಿ ಅನಾಥವಾಗಿ ಪ್ರಖರ ಬಿಸಿಲಿನಲ್ಲಿ ಬಿದ್ದಿದೆ. ಒಮ್ಮೆಗೆ ಅವನ್ನೆಲ್ಲ ಯೋಚಿಸಿ ಜಗಬಂಧುವಿನ ಮೈ ಜುಂ ಎಂದಿತು. ಎಷ್ಟು ದೂರ ತನ್ನ ಕೈಯಿಂದ ಎಸೆಯಲು, ಸಾಧ್ಯವೋ ಅಷ್ಟು ದೂರ ಈ ಟಿಫಿನ್ ಬಾಕ್ಸನ್ನು ಎಸೆದು, ಹೆಣ ಮುಟ್ಟಿದ ಮೇಲೆ ಸ್ನಾನ ಮಾಡುವಂತೆ, ತನ್ನ ಕೈಯನ್ನು ವೇಯಿಟಿಂಗ್ ರೂಮಿನ ಸಿಂಕಿನಲ್ಲಿ ಚೆನ್ನಾಗಿ ತಿಕ್ಕಿ ತೊಳೆದುಕೊಂಡು, ಬಿಡುಗಡೆ ಹೊಂದಿ ನಂತರ ನಿರ್ಯೋಚನೆಯಿಂದ ಆಫೀಸಿನೆಡೆಗೆ ಹೆಜ್ಜೆ ಹಾಕಬಹುದು ಎಂದುಕೊಂಡ. ಆದರೆ ಒಂದು ವೇಳೆ ಅಲ್ಲಿ ಬಿದ್ದು ಸತ್ತವನು ಬೇರೆ ಇನ್ನಾ ರಾದ್ರೂ ಆಗಿದ್ದರೆ ... ವೈಯಿಟಿಂಗ್ ರೂಮಿನಿಂದ ಕೈ ತೊಳೆದು ಹೊರ ಬರುತ್ತಿದ್ದಂತೆಯೇ ಕಪ್ಪು ಹೊಳೆವ ಕಣ್ಣಿನ ಸಪೂರ ಮುಖದ ಕದ್ರುಗಿನ ವ್ಯಕ್ತಿ ಎದುರಾಗಿ, ಬೆನ್ನು ತಟ್ಟಿ, 'ಸಾರ್! ಕ್ಷಮಿಸಿ ನನ್ನ ಟಿಫಿನ್ ಬಾಕ್ಸ್!' ಎಂದು ಹಲ್ಲು ಗಿಂಜಿದರೆ!

ಜಗಬಂಧು ಮೆಲ್ಲಗೆ ಕತ್ತು ತಿರುಗಿಸಿ ಹಿಂದೆ ತಿರುಗಿ ನೋಡಿದ: ಇಲ್ಲ ಅವನನ್ನು ಅಲ್ಲಿ ಯಾರೂ ದಿಟ್ಟಿಸಿ ನೋಡುತ್ತಿಲ್ಲ. ಏನೊಂದು ಗುರಿ ಗುರಾಚಾರವಿಲ್ಲದ, ಸೋಮಾರಿಗಳಾಗಿ ಅಲೆ ಯುವ ಕೆಲ ಅಲೆಮಾರಿಗಳನ್ನು ಬಿಟ್ಟರೆ ಪ್ಲಾಟ್ ಫಾರಂ ಈಗಾಗಲೇ ನಿರ್ಜನವಾಗ್ತಾ ಬಂದಿತ್ತು. ಪುನಃ ನಂಬರ್ ಒಂದು ಪ್ಲಾಟ್‌ಫಾರಂನಲ್ಲಿ ಯಾವುದೋ ಲೋಕಲ್ ಬಂದು ನಿಂತಿತು. ಪುನಃ ಜನ ಪ್ರವಾಹ ಹೊರಹೊರಡಲು ಸುಗ್ಗುತ್ತದೆ. ಇವೆಲ್ಲ ಕೇವಲ ಒಂದೇ ನಿಮಿಷ ನಂತರ ಹಿಂದಿನ ಶಾಂತಿ ಅಲ್ಲಿ ನೆಲಸುತ್ತೆ. ವೇಳೆಯ ಅಪವ್ಯಯ ಮಾಡಲು ಜಗಬಂಧುವಿಗೀಗ ವ್ಯವಧಾನವಿಲ್ಲ. ಈಗಾಗಲೆ ಅವನಿಗೆ ಬೇಕಾದಷ್ಟು ತಡವಾಗಿತ್ತು. ಒಂದು ವೇಳೆ ಹೊರ ಹೋಗುವಾಗ, ಈ ಡಬ್ಬಿಯನ್ನು ಟಿಕೆಟ್ ಕೇಳಲು ಕೈ ಚಾಚಿ ನಿಂತ ಟೀಸೀಯ ಕೈಯಲ್ಲಿ ಇರಿಸಿದರೆ ಅವನದನ್ನು ಕೊಂಡು ಹೋಗಿ ನಿರ್ದಾಕ್ಷಿಣ್ಯವಾಗಿ ಕಳೆದಿದೆ ಸಿಕ್ಕಿದೆ ಎಂಬ ಫಲಕವಿರುವ ಕೋಣೆಗೆ ಬಿಸಾಡಿ ಬಿಡ್ತಾನೆ. ಪ್ರೀತಿ ಹಾಗೂ ಅಂತಃಕರಣದಿಂದ ತಯಾರಿಸಿ ಇರಿಸಿರುವ ಈ ಡಬ್ಬಿಯೂಟ ಅಲ್ಲಿ ಕೊಳೆತು ಹೋಗುತ್ತೆ. ಅಲ್ಲಿ ಬಿದ್ದ ವ್ಯಕ್ತಿ ಅದನ್ನು ಎತ್ತಿಕೊಳ್ಳಲು ಎದ್ದು ಬರುತ್ತಾನೆಂದೇನಿಲ್ಲವಲ್ಲ.

ಈಗಾಗಲೇ ಜಗಬಂಧು ಸ್ಟೇಷನ್ನಿನಿಂದ ಹೊರ ಬಂದಿದ್ದ. ಆಫೀಸಿಗಭಿಮುಖವಾಗಿ ಬಸ್ಸಿನಲ್ಲಿ ಪ್ರಯಾಣಿಸುತ್ತ ಕೊನೆ ಸಲದ ಪ್ರಯತ್ನವೆನ್ನು ವಂತೆ, ಬಸ್ಸಿನ ಜನಜಂಗುಳಿಯಲ್ಲಿ ಬಾಗಿಲ

ಬಳಿ ತೂರಾಡುತ್ತ, ಕಿಡಿಕಿಯ ಬದಿ ಕುಳಿತಿದ್ದ, ಒಬ್ಬ ದಢೂತಿ ವ್ಯಕ್ತಿಯು ಭುಜ ಅಲುಗಿಸಿ "ರಾಯ್ರೆ ಸ್ವಲ್ಪ ಇದನ್ನು ಹಿಡ್ಕೊಳ್ತೀರಾ" ಎಂದು ದೈನ್ಯನಾಗಿ ಬೇಡಿಕೊಂಡ. ಆದಷ್ಟು ಕಿಡಿಕಿಯಿಂದ ದೂರ ಬಾಗಿಲ ಬಳಿ ಜೋಲಾಡುತ್ತ ಆ ವ್ಯಕ್ತಿಗೆ ಪ್ರತ್ಯುತ್ತರ ಕೊಡಬೇಕೆಂದು ಹಲವಾರು ಸಲ ಮನದಲ್ಲೇ ಹೇಳಿಕೊಂಡು, ಕಂಠಪಾಠ ಮಾಡಿಕೊಂಡ. 'ಕ್ಷಮಿಸಿ ನೀವು ತಪ್ಪು ತಿಳ-ಕೊಂಡಿದ್ದೀರಿ. ಇದು ನನ್ನ ಟಿಫಿನ್ ಬಾಕ್ಸ್ ಅಲ್ಲ, ನಾನು ಕೊಟ್ಟೇ ಇಲ್ಲ!'

ತಾನಿಳಿಯುವ ಸ್ಥಳ ಬಂದಾಗ ಜಾಣತನದಿಂದ ಬೇಗ, ಬಸ್ಸಿನಿಂದಿಳಿಯಬೇಕೆನ್ನುವಷ್ಟರಲ್ಲಿಯೇ ಏನೊಂದೂ ಮಾತನಾಡದೆ ಆ ಧಡೂತಿ ಆಸಾಮಿ ಜಗಬಂಧುವಿನ ಕೈಗೆ ಆ ಟಿಫಿನ್ ಬಾಕ್ಸನ್ನು ತೂರಿಸಿದ್ದ. ಶುಷ್ಕ ನಗೆ ನಕ್ಕು ಧನ್ಯ-ವಾದ ಅರ್ಪಿಸುವುದೊಂದೇ ಜಗಬಂಧುವಿಗೆ ಉಳಿದ ಮಾರ್ಗ. ಬಸ್ಸಿನಿಂದಿಳಿದು ವೇಗವಾಗಿ ನಡೆದು ಆಫೀಸು ತಲುಪಿ ಮೇಲೆ ಹೋಗಲು, ಲಿಫ್ಟಿನ ಮುಂದಿದ್ದ ದೊಡ್ಡ ಸರದಿಯಲ್ಲಿ ತಾನೂ ಒಬ್ಬನಾಗಿ ನಿಂತುಕೊಂಡ. ಇಂದವನು ತುಂಬಾ ಬೆವರುತ್ತಿದ್ದ. ಜಗಬಂಧು ಭಟ್ಟಾಚಾರ್ಯ ತನ್ನ ಜೀವನದಲ್ಲೇ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಅನಾಯಾಸವಾಗಿ ಎಲ್ಲವನ್ನು ನಿಭಾಯಿಸುತ್ತಿದ್ದ. ಇಂದೇಕೋ ಅವನ ವರ್ತನೆ ಅವನ ಸ್ವಭಾವಕ್ಕೆ ವ್ಯತಿರಿಕ್ತವಾಗಿತ್ತು. ಲಿಫ್ಟ್, ಮೇಲೊಯ್ಯಲು ಕೆಳಗಿಳಿದು ಬಂತು. ಅಷ್ಟರಲ್ಲೆ ಕೊನೆಯಲ್ಲಿ ನಿಂತಿದ್ದ ಬೃಂದಾವನ ಮಲ್ಲಿಕ ಜೋರಾಗಿ ಕೂಗಿದ "ಜಗದಾ! ಹೇಗೂ ಬೇಗ ಮೇಲೆ ಹೋಗ್ತಾ ಇದಿಯ. ನಾನು ಬರೋವರೆಗೂ ಅದನ್ನು ಬಿಟ್ಟುಕೊಡಬೇಡಪ್ಪಾ!"

ಅದನ್ನು ಅಂದ್ರೆ ಹಾಜರೀ ಪುಸ್ತಕ! ದಿನಾ ತಡವಾಗಿ ಬಂದು, ಯಾರನ್ನಾದರೂ ಗೋಗರೆ-ಯೋದು ಬೃಂದಾವನನ ನಿತ್ಯದ ಅಭ್ಯಾಸವಾಗಿ ಬಿಟ್ಟಿತ್ತು.

ಈ ಮೂರಂತಸ್ತಿನ ದೊಡ್ಡ ನಿವೇಶನದಲ್ಲಿ ಹಲವಾರು ಸಂಸ್ಥೆಗಳ ಕಚೇರಿ ಮನೆ ಮಾಡಿವೆ. ದೊಡ್ಡ ಎರಡು ಲಿಫ್ಟುಗಳು ಸತತವಾಗಿ ಮೇಲೆ ಕೆಳಗಿಳಿದು ಜನರ ಗುಂಪನ್ನು ಮೇಲೆ ಕರೆದೊಯ್ಯುತ್ತಿದ್ದವು. ಎಲ್ಲಾ ಪರಿಚಿತ ಮುಖಗಳೇ, ಅಬ್ಬಾ ಎಷ್ಟೊಂದು ಸೆಕೆ! ನಮಸ್ಕಾರ ಸರ್! ಎನ್ನುವ ಪದ ರೂಢಿಗೆ ಬಂದು ಈಗ ಅಭ್ಯಾಸವಾಗಿಬಿಟ್ಟಿದೆ. ಬೋಂಡಾ ಉರಫ್ ಬೃಂದಾವನ ಜಗಬಂಧುವಿನ ಸಹಕಾರ್ಮಿಕನಷ್ಟೇ ಅಲ್ಲ ಜೀವದ ಆಪ್ತ ಗೆಳೆಯ ಕೂಡಾ. ಪ್ರತಿ ದಿನ ಮಧ್ಯಾಹ್ನ ರಸ್ತೆ ಬದಿಯಂಚಿನಲ್ಲಿ ಮಾರಲ್ಪಡುವ ಕಡಿಮೆ ಬೆಲೆಯ ಬೋಂಡಾ ಆಂಬೋಡೆಗಳನ್ನು ಅವರಿಬ್ಬರೂ ಒಟ್ಟಾಗಿಯೆ ಮೇಯಲು ಹೋಗುತ್ತಿದ್ದರು. ಅದರ ಫಲವಾಗಿ ದಿನಾಲೂ ಜಗಬಂಧುವನ್ನು ಅಜೀರ್ಣ ಪೀಡಿಸುತ್ತಿತ್ತು. ಆದರೂ ಅವನಿಗೆ ಆ ತಿಂದಿಗಳ ವ್ಯಾಮೋಹ ತಪ್ಪಿರಲಿಲ್ಲ. ಆದರೆ ಬೊಂಡಾ ಪುಣ್ಯವಂತ, ಒಂದು ದಿನವೂ, ಈ ತಿಂದಿಗಳನ್ನು ತಿಂದು ಹೊಟ್ಟೆ ಕೆಟ್ಟಿದೆ ಎಂದು ನರಳಿದವನಲ್ಲ. ಬೋಂಡಾನಿಗೆ ಆಶ್ವಾಸನೆ ನೀಡುವಂತೆ, ಟಿಫಿನ್ ಬಾಕ್ಸನ್ನು ಕಂಕುಳಲ್ಲಿ ಮರೆಮಾಡಿ ಜಗಬಂಧು ಆತನಿಗೆಂದ, "ಹೆದರಬೇಡಪ್ಪಾ ಮೊದಲದು ನನ್ನ ಕೈ ಸೇರಲಿ ಆಮೇಲದನ್ನು ಬಿಟ್ಟರೆ ತಾನೆ?!"

ಟೈಪಿಸ್ಟ್ ಕಮಲ ಕೂಡುವುದು ಜಗಬಂಧುವಿನ ಟೇಬಲ್ಲಿನ ಬಲಬದಿಗೆ. ಬೆಳ್ಳಗಿನ ದುಂಡನೆಯ ಮುಖ, ಬಿಲ್ಲಿನಾಕಾರಕ್ಕೆ ತೀಡಿದ ಹುಬ್ಬು, ಸ್ವಲ್ಪ ದೊಡ್ಡದೆನಿಸುವ ಬಾಯಿ, ವೈಮಾಟ ತನ್ನ ಒಡತಿಯ ಆಣತಿಯನ್ನು ಪಾಲಿಸುತ್ತಿರುವುದಕ್ಕೆ ಸಾಕ್ಷಿ. ಎಲ್ಲೆಲ್ಲಿ ಎಷ್ಟಿರಬೇಕೊ ಅಷ್ಟೆ. ತೂಕ ಮಾಡಿದಂತೆ. ತನ್ನ ದೇಹವನ್ನು ಸಮತೋಲನ ಮಾಡಿಕೊಂಡು, ವಯ್ಯಾರವಾಗಿ ನಡೆಯುವ ಕಮಲಳನ್ನು ಹೊಸದಾಗಿ ಸೇರಿದ ಆಫೀಸಿನ ಇತರ ಹುಡುಗಿಯರು ಅಸೂಯೆಯಿಂದ ನೋಡುವಂತಿರುತ್ತಿತ್ತು. ಜಗ-ಬಂಧುವಿನ ಪ್ರಕಾರ ಕಮಲಳಲ್ಲಿದ್ದ ಎರಡೇ ಅವಗುಣಗಳೆಂದರೆ ಸಾಲಾಗಿ ಹೊಳೆಯುವ ದಂತಪಂಕ್ತಿಗಳು. ಸದಾ ಎಲೆ ಅಡಿಕೆಯನ್ನು ಮೆಲ್ಲುವುದರಿಂದ ಅವು ಕೆಂಪಾಗಿದ್ದವು. ಇನ್ನೊಂದು ಹಿಟ್ಟಿನ ಮೂಟೆಯಂತೆ ಹೊರ ಹೊಮ್ಮುವ ಅವಳ ಸೊಂಟದ ಭಾಗದ ಬೊಜ್ಜು, ಅವಳು ನಡೆದಾಗ. ನಿಂತಾಗ ಬೊಜ್ಜು ಎಲ್ಲೊ ಮಾಯ

ವಾಗಿರುತ್ತಿತ್ತು. ಅದೇ ಅವಳು ಕುಳಿತಾಕ್ಷಣ ಪ್ರತ್ಯಕ್ಷವಾಗುತ್ತಿತ್ತು. ಈ ಅವಗುಣಗಳ ಬಗ್ಗೆ ಯೋಚಿಸಲು ಹಕ್ಕಿರೋದು ತನಗೊಬ್ಬನಿಗೇ ಎನ್ನುವುದು ಜಗಬಂಧುವಿನ ಧೋರಣೆ.

ಕಮಲಳ ಟೇಬಲಿನ ಮುಂದೆ ಹಾದು ಹೋಗುವಾಗ, ಅವಳನ್ನು ವಿಚಾರಿಸಿದ "ಏನ್ರಿ, ನಿನ್ನೆ ಕಾಣ್ಲೇ ಇಲ್ಲವಲ್ಲ!"

"ಏನ್ಮಾಡೋದು ಹೇಳಿ. ಮೊನ್ನೆ ತಿಂದ ಆಲೂ ಬೋಂಡಾ ನನ್ನ ಹೊಟ್ಟೇನೇ ಕೆಡಿಸಿಬಿಟ್ಟಿದೆ. ನಿನ್ನೆ ಇಡೀ ಟಾಯಲೆಟ್‌ನಿಂದ ಬಾತುರೂಮಿಗೆ ಓಡಾಡೋದ್ರಲ್ಲೇ ಸುಸ್ತಾದೆ" ಎಂದಳು ಕಮಲ ವಯ್ಯಾರವಾಗಿ.

'ನಾಚಿಕೆಗೆಟ್ಟವಳು. ತನ್ನ ಭೇದಿ ವಿಷಯವನ್ನು ಯಾವ ಸಂಕೋಚವಿಲ್ಲದೆ ವಿವರಿಸ್ತಾ ಇದ್ದಾಳೆ.' ಜಗಬಂಧು ಮನದಲ್ಲೇ ಬೈದುಕೊಂಡ. ಆದರೂ ಏನಾದರೂ ಹೇಳಬೇಕೆಂದು "ಯಾವುದಾದರೂ ಸ್ಟ್ರಾಂಗ್ ಔಷಧಿ ತೊಗೋಬೇಕಿತ್ತು." ನಂತರ ಅವಳನ್ನು ಛೇಡಿಸುವ ಮನಸ್ಸಾಗಿ ಹೇಳಿದ, "ಎಲ್ಲಾ ಬಿಟ್ಟು ನಿಮಗೆ ಬೋಂಡಾ ತಿನ್ನುವ ಚಪಲ ಯಾಕೆ ಬಂತು?"

"ನನ್ನ ಸ್ನೇಹಿತೆ ಬಲವಂತ ಮಾಡಿದಳು. ಎಷ್ಟು ಹೇಳಿದ್ರೂ ಕೇಳ್ಲಿಲ್ಲ. ಬೇಡಾ ಅನ್ನೋಕೆ ಸಾಧ್ಯವಾಗ್ಲೆ ಇಲ್ಲ. ನೀವು ದಿನಾ ಅದನ್ನು ಹೇಗೆ ತಿಂದು ಅರಗಿಸಿಕೊಳ್ತೀರೋ ಕಾಣೆ" ಕಮಲ ತನ್ನ ಆಶ್ಚರ್ಯ ವ್ಯಕ್ತಪಡಿಸಿದಳು.

"ನೀವು ಅಷ್ಟೇ ನಮ್ಮನ್ನು ತಪ್ಪು ತಿಳ್ಕೊಂಡಿರೋದು. ನನಗಂತೂ ಅಜೀರ್ಣ ವಾಸಿಯಾಗದ ಖಾಯಿಲೆಯಾಗ್ಬಿಟ್ಟಿದೆ."

"ಹಾಗಾದ್ರೆ ನಿಮ್ಮದೆ ತಪ್ಪು. ನಿಮ್ಮ ಮನೆಯಾಕೆಗೆ ಹೇಳಿ. ದಿನಾ ಮನೆ ಊಟ ತರಿಸೋಕಾಗೊಲ್ವೆ?"

ಮನೆ ಊಟ, ಜಗಬಂಧು ತನಗೆ ತಾನೆ ಹೇಳಿಕೊಂಡ.

ಹಸಿವಾಗಿಲ್ವೆ ಅಂತಾನೇ? ಹೊಟ್ಟೇಲಿ ಲಾವಾರಸ ಹರೀತಾ ಇದೆ. ಮನಸಲ್ಲೇ ಬೋಂಡಾನನ್ನ ಬೈದ. ತಕ್ಷಣ ಟಿಫಿನ್‌ಬಾಕ್ಸನಲ್ಲಿ ಇರೋದೇನು ಎಂಬ ಯೋಚನೆ ಅರೆಕ್ಷಣ ಮಿಂಚಿ ಮಾಯವಾಯಿತು.

ಜಗಬಂಧು ನಿಧಾನವಾಗಿ ತಲೆ ಎತ್ತಿ ಬೋಂಡಾನನ್ನು ನೋಡಿ, "ಏನಯ್ಯಾ?" ಎಂದ.

"ಬೇಗ ಬಾರಪ್ಪಾ. ಇವತ್ತು ಅಮೀಯಾನ ಅಂಗಡೀಗೆ ಹೋಗೋಣ. ಅವನು ಅದೇನೋ ಹೊಸ ತರಹ ಕೋಸ್‌ವಡೆ ಮಾಡ್ತಾನಂತೆ. ಆ ತರದ್ದು ಪ್ರಪಂಚ ಹುಡುಕಿದ್ರೂ ಸಿಗೊಲ್ಲ."

"ಇವತ್ತು ದಯವಿಟ್ಟು ನೀನು ನನ್ನೆದುರು ತಿಂಡಿ ಹೆಸರೆತ್ತಬೇಡ. ನಿನ್ನೆಯಿಂದ ನನ್ನ ಹೊಟ್ಟೆ ಸರಿಯಾಗಿಲ್ಲ." ಜೋರಾಗಿ ಕೈಯಿಂದ ಒಂದು ಸಲ ತನ್ನ ಹೊಟ್ಟೆ ಕಿವಿಚಿಕೊಂಡು "ನೀನೊಬ್ನೆ ಹೋಗು ನಾ ಬರೊಲ್ಲ" ಎಂದು ಹೇಳಿದ.

"ಹಾಗಾದ್ರೆ ನೀನಿವತ್ತು ಏನೂ ತಿನ್ನೋದೇ ಇಲ್ವೆ?"

ಒಳ್ಳೆ ಬೀಗರೌತಣದಂತೆ ಮಾವ ಅಳಿಯನು ಉಪಚಾರ ಮಾಡೋ ತರಹ ಇವನೆಲ್ಲೊ ನನಗೆ ಗಂಟು ಬಿದ್ದಿದ್ದಾನೆ ಪುನಃ ತನ್ನ ತಲೆ ಅಲ್ಲಾಡಿಸಿ. "ಬೇಡಪ್ಪಾ ಇವತ್ತು" ಎಂದ.

ಬೋಂಡಾ ಸ್ವಲ್ಪ ಜಿಗಣೆ ತರಹ. ಹಿಡಿದುಕೊಂಡ್ರೆ ಬಿಡೋದು ಕಷ್ಟ. "ಹಾಗಾದ್ರೆ ನಿನಗೆ ಡೈಜೆಸ್ಟಿವ್ ಗುಳಿಗೆ ತಂದ್‌ಕೊಡ್ಲಾ?" ಎಂದು ಗೋಗರೆದ.

ನಿರಾಕರಿಸಲಾಗದೆ "ಹಾಗೇ ಮಾಡಪ್ಪಾ" ಎಂದು ಜಗಬಂಧು ತನ್ನ ಸಮ್ಮತಿ ಸೂಚಿಸಿದ. ತಕ್ಷಣ ಹಣಕ್ಕಾಗಿ ಬೋಂಡಾ ಕೈ ಮುಂದೆ ಚಾಚಿದ. ಥೂ ಹಲ್ಕಾ! ಎಂದು ಮನಸಲ್ಲೇ ಅವನನ್ನು ಶಪಿಸಿ ಚಾಚಿದ ಕೈಗೆ ನಾಲ್ಕಾಣೆ ಬಿಲ್ಲೆ ಹಾಕಿದ.

ಎಚ್. ಪಿ. ಅಂದ್ರೆ ಹಿಂದೂಸ್ಥಾನ ಪ್ಲಾಸ್ಟಿಕ್ ಮೊದಲು ಕೇವಲ ಒಂದು ಕೋಣೆಯಲ್ಲಿ ಪ್ರಾರಂಭವಾಗಿತ್ತು. ಅದೇ ಈಗ ಈ ನಿವೇಶನದ ಒಂದು ದೊಡ್ಡ ಭಾಗವನ್ನು ಆಕ್ರಮಿಸಿಕೊಂಡಿದೆ. ಮಧ್ಯದ ದೊಡ್ಡ ಹಾಲಿನಲ್ಲಿ ಮೂಲೆಯ ಟೇಬಲ್ಲಿನ ಮೇಲೆ ಈ ಆಫೀಸಿನ ಅತ್ಯಂತ ಅನುಭವಸ್ಥ ಕೆಲಸಗಾರನಾದ ಜಗಬಂಧು ಭಟ್ಟಾಚಾರ್ಯ ಕುಳಿತುಕೊಳ್ಳುತ್ತಿದ್ದುದು. ಸಹೋದ್ಯೋಗಿಗಳು ಹರಟೆ ಹೊಡೆಯುತ್ತ ತಾವು ತಂದಿದ್ದ ಊಟ ಮಾಡುತ್ತಿದ್ದರು. ಕಮಲಳ ಮೇಜಿನ ಮೇಲೆ ಅರ್ಧ ತೆರೆದಿಟ್ಟ ಬಿಸ್ಕಟ್ಟಿನ ಪ್ಯಾಕೆಟೊಂದಿತ್ತು. ಕಮಲಳ ರೀತಿಯೇ ಹಾಗೆ. ಕಂಡಾಪಟ್ಟೆ ತಿಂದು ಅಜೀರ್ಣ ಮಾಡಿ ವಾಯು ನೋವಿನಿಂದ ಬಳಲುವ ಸುಧಾ ಎಂದಾದರೂ ಬೇಗೆದು 'ತಿಂಡಿ ಮಾಡಿಕೊಟ್ಟಿದ್ದುಂಟೆ? ದಿನ

ಬೆಳಗಾದ್ರೆ ಅವಳ ಗೊಣಗಾಟ ತಪ್ಪಿದ್ದೆ ಅಲ್ಲ, ಐದು ಮಕ್ಕಳು, ನನಗೆ ಸರಿಯಾದ ವೇಳೆಗೆ ಒಂದನ್ನ ಸಾರು ಬೇಯಿಸಿ ಹಾಕಿದ್ರೆ ಅಷ್ಟೆ ಪುಣ್ಯ. ದಿನಾ ಆಫೀಸಿಗೆ ಹೊರಡುವ ಮೊದಲು ಅವ–ಸರವಸರವಾಗಿ ಅನ್ನ ಬಾಯಿಗೆ ತುರುಕಿಕೊಳ್ತಾ ಕುರಿಯಂತೆ ತಲೆ ತಗ್ಗಿಸಿ, ಸುಧಾಳ ಬಾಯಿಂದ ಹೊರಹೊಮ್ಮುವ ನಿರರ್ಗಳ ಮಾತನ್ನು ತಲೆಯಾಡಿಸುತ್ತ ಕೇಳುವುದನ್ನು ರೂಢಿ ಮಾಡಿಕೊಂಡಿದ್ದ. ಹಾಗೇನಾದ್ರೂ ಒಂದು ಪಕ್ಷ ಅವನೇನಾದ್ರೂ ಮಾಡದೇ ಇದ್ರೆ, ಸುಧಾಮಯಿ ಎಬ್ಬಿಸುವ ಬಿರುಗಾಳಿಯನ್ನೆದುರಿಸಬೇಕು. ಅದನ್ನವನು ಕನಸಿನಲ್ಲೂ ಬಯಸುತ್ತಿರಲಿಲ್ಲ.

ಇಂದು ಕಮಲಳ ಪ್ರಶ್ನೆಗೆ ದೊಡ್ಡದಾಗಿ ಹೂನಗೆ ಚೆಲ್ಲಿ ಕಂಕುಳಲ್ಲಿ ಬಚ್ಚಿಕೊಂಡಿರುವ ಟಿಫಿನ್ ಬಾಕ್ಸ್ ತೋರಿಸಿ, 'ನೋಡ್ರಿ ಇವತ್ತು ನಾನು ಮನೆಯಿಂದಲೇ ಊಟ ತಂದಿರೋದು ಎಂದು ಅವಳ ಮುಂದೆ ಹಿಡಿದರೆ ಹೇಗೆ?' ಬರಿ ಆ ರೀತಿಯ ಯೋಚನೆಯಿಂದಲೇ, ಅವನ ಮೈ ತುಂಬ ನವಿರೆದ್ದಿತು. ತನ್ನ ಸೀಟಿಗೆ ಹೋಗಿ ಕುಳಿತು




ಕೊಳ್ಳುತ್ತಿರುವಂತೆಯೇ ಅವನ ಮನದಲ್ಲಿ ಪ್ರಶ್ನೆ ಎದ್ದಿತು. ಆ ಟಿಫಿನ್ ಬಾಕ್ಸ್‌ನಲ್ಲಿ ಏನಿರಬಹುದು?

ಮಧ್ಯಾಹ್ನ ಊಟದ ವಿರಾಮದ ವೇಳೆಗೆ ಜಗ-ಬಂಧು ನಿರೀಕ್ಷಿಸಿದಂತೆಯೇ, ಬೋಂಡಾ ಅವನ ಮುಂದೆ ಬಂದು ಒಕ್ಕರಿಸಿದ. ಅವನು ಬರದಿರುವುದನ್ನು ಗಮನಿಸಿಯೇ ಇಲ್ಲವೇನೋ ಎನ್ನುವಂತೆ ಫೈಲಿನಲ್ಲಿ ತಲೆ ಹುದುಗಿಸಿ, ತನ್ನ ಕೆಲಸದಲ್ಲಿ ಮಗ್ನನಾಗಿರುವವನಂತೆ ನಟಿಸಿದ. "ಬರೆದದ್ದು ಸಾಕು ಬಾರಪ್ಪಾ, ಹೋಗೋಣ" ಬೋಂಡಾ ಸ್ನೇಹಿತನನ್ನು ಕರೆದ.

ಜಗಬಂಧು ಇನ್ನೂ ಬರೆಯುತ್ತಲೆ ಇದ್ದ. ಬೆಳಿಗ್ಗೆ ಸುಧಾ ಗೊಣಗುವಾಗಲೂ ಅವನು ಇದೇ ರೀತಿ ತಗ್ಗಿಸಿದ ತಲೆ ಮೇಲೆತ್ತುತ್ತಿರಲಿಲ್ಲ.

ಬೋಂಡಾ ಕಮಲಳ ಕಡೆ ತಿರುಗಿ ಜೋರಾಗಿ ಹೇಳಿದ "ಏನ್ರಿ ಇವತ್ತು ಇವನಿಗೇನಾಯ್ತು? ಕುದುರೆಗೆ ಇವನನ್ನು ಕಟ್ಟಿ ಎಳ್ಕೊಂಡು ಹೋದ್ರೂ ಇವನೇನು ಇಲ್ಲಿಂದ ಕದಲೋದಿಲ್ಲ ಅಂತ ಕಾಣುತ್ತೆ. ಏನಯ್ಯಾ ಮಹಾಶಯ ನಿನಗಿವತ್ತು ಹಸಿವೆ–ಗಿಸಿವೆ ಆಗ್ತಾ ಇದ್ಯೋ ಇಲ್ವೊ?"

"ಏನೆಂದೆ? ಬಡ್ಡಿಮಗನೆ! ನನಗೀಗ ಕೊಳ್ಳೋದು ಇಲ್ಲವೆ? ಹೊಟ್ಟೆಗೆ ಸರಿಯಾಗಿ ತಿನ್ನದೆ ಪಥ್ಯ ಮಾಡೋದು." ಆಫೀಸಿನ ಇತರ ಕೆಲಸಗಾರರು ಊಟ ಮುಗಿಸಿ ಹತ್ತಿರದ ಗ್ರ್ಯಾಂಡ್‌ಸೇಲ್ ಎಂಬ ಫಲಕವಿರುವ ಅಂಗಡಿಗಳಿಗೆ ನುಗ್ಗಿದರು.

ಈ ಹಲವಾರು ಮುಖಗಳ ನಡುವೆ ಆ ಸಪೂರ ಕಪ್ಪು ತೀಕ್ಷ್ಣವಾದ ಕಣ್ಣುಗಳುಳ್ಳ ಮುಖ ಒಂದರೆಕ್ಷಣ ಜಗಬಂಧುವಿನ ಮುಖದೆದುರು ತೇಲಿ ಬಂತು. ಅವನು ಚಿಕ್ಕ ಪ್ರಾಯದವನೇ ಇದ್ದಿರಬೇಕು! ಒಮ್ಮೆಗೆ ಆಗಂತುಕನನ್ನು ಸ್ಮರಿಸಿಕೊಳ್ಳುವಾಗ ಭೂತಕಾಲದ ಪ್ರಯೋಗ ಮಾಡಿದ್ದ. ಅವನ ಹೊಟ್ಟೆ ಈಗಾಗ್ಲೆ ಸತತವಾಗಿ, ತನ್ನ ಹಸಿವಿನ ಸಂದೇಶವನ್ನು ಮೆದುಳಿಗೆ ರವಾನಿಸುತ್ತಿತ್ತು. ಅದನ್ನು ಈಗಾಗಲೆ ಎರಡು ಬೀಡಿಯನ್ನು ಸೇದಿದ್ದರಿಂದ ಅವನು ಹಸಿವೆಯನ್ನೂ ಕೆರಳಿತ್ತು. ಎಲ್ಲರೂ ತಮ್ಮ ಸ್ಥಳ ಬಿಟ್ಟೆದ್ದು ಹೊರ ಹೋಗಿದ್ದಾರೆ ಎನ್ನುವುದನ್ನು ಖಾತ್ರಿಪಡಿಸಿಕೊಂಡು, ಜಗಬಂಧು ಹಿರಿಯ ಅಧಿಕಾರಿಗಳಿಗೆಂದು ಮೀಸರಿಲಿಸಿರುವ ಹೊಳೆಯುವ ಬಿಳಿ

ಟೈಲ್ಸ್‌ನಿಂದ ಮಾಡಿರುವ ಬಾತ್‌ರೂಮಿನ ಕಡೆ ಹೆಜ್ಜೆ ಹಾಕಿದ. ಒಂದು ಹೊರೆ ಲಿಕ್ವಿಡ್ ಸಾಬೂನನ್ನು ಕೈಗೆ ಸುರುವಿಕೊಂಡು ತನ್ನ ಮುಖ ಹಾಗೂ ಕೈಗಳನ್ನು ಚೆನ್ನಾಗಿ ತಿಕ್ಕಿ ತಿಕ್ಕಿ ತೊಳೆದು ಕೊಂಡು, ಅವನು ಟಾಯಲೆಟ್ಟಿನ ಒಳಗೆ ಪ್ರವೇಶಿಸಿದ.

ಕಮೋಡ್ ಸ್ವಚ್ಛವಾಗಿ ತೊಳೆಯಲ್ಪಟ್ಟು ಬೆಳಗ್ಗೆ ಹೊಳೆಯುತ್ತಿತ್ತು. ಗಾಳಿಯಲ್ಲಿ ಫಿನಾಯಿಲ್ ವಾಸನೆ ತೇಲಿ ಬಂತು. ಹೆಚ್ಚುತ್ತಿರುವ ಸಂತೋಷವನ್ನು ಅದುಮಿಟ್ಟು, ಅವನು ತನ್ನ ಪೆಟ್ಟಿಗೆಯ ಮಡಿಕೆಯೊಳಗಿನಿಂದ ಕೈ ತೂರಿಸಿದ. ಅವನೆದೆ ಒಂದೇ ಸಮ ಬಡಿದುಕೊಳ್ಳುತ್ತ ಇತ್ತು. ಹಿಂದೆ ಚಿಕ್ಕ ಹುಡುಗನಾಗಿದ್ದಾಗ, ಪುಸ್ತಕವನ್ನು ಶರ್ಟಿನೊಳಗೆ ಸೇರಿಸಿ ಶಾಲೆಯಿಂದ ಪಲಾಯನ ಮಾಡುವಾಗ ಅಥವಾ ಬೇರೆ ಹುಡುಗರಿಂದ ಅಶ್ಲೀಲ ಸಾಹಿತ್ಯವನ್ನು ಎರವು ಪಡೆದು ಬಚ್ಚಲ ಮನೆ ಬಾಗಿಲು ಹಾಕಿಕೊಂಡು ಅದನ್ನು ಓದುವಾಗ ಇದೇ ರೀತಿ ಅವನೆದೆ ಬಡಿದುಕೊಳ್ಳುತ್ತಿರುತ್ತಿತ್ತು. ಬಹುಶಃ ಅವನ ಕೈ ಜೋರಾಗೇ ನಡಗುತ್ತಿತ್ತು. ಅವನ ಚಡಪಡಿಕೆ ಇನ್ನೂ ಹೆಚ್ಚಾಯಿತು. ಟಿಫಿನ್‌ಬಾಕ್ಸಿನಲ್ಲಿ ಇರೋದು ಏನು? ನಿಧಾನವಾಗಿ ಅವನ ಕೈಗಳು ಟಿಫಿನ್‌ಬಾಕ್ಸನ್ನು ಸುತ್ತಿದ್ದ ಕಾಗದದ ಪೊಟ್ಟಣ ಸರಿಸಿ ಟಿಫಿನ್‌ಬಾಕ್ಸನ್ನು ಹೊರತೆಗೆದವು. ಆ ಕಾಗದವನ್ನು ಮುಷ್ಟಿಯಲ್ಲಿ ಉಂಡೆ ಮಾಡಿ ಕಮೋಡಿನೊಳಗೆ ಎಸೆದು ಜೋರಾಗಿ ಫ್ಲಾಷ್‌ಚೈನ್ ಎಳೆದು ನೀರು ಹಾಯಿಸಿದ. ಅರೆಕ್ಷಣದಲ್ಲಿ ಅದರ ಅಸ್ತಿತ್ವ ಇಲ್ಲದಂತಾಯಿತು. ಅವನೀಗ ಕಮೋಡಿನ ಕಪ್ಪು ಮುಚ್ಚಳ ಮುಚ್ಚಿ ಅದರ ಮೇಲೆ ಕುಳಿತುಕೊಂಡ. ಅವನ ಇಂದ್ರಿಯಗಳು ಆ ಡಬ್ಬಿಯ ಸ್ಪರ್ಶ ಮಾತ್ರದಿಂದಲೇ ಜಾಗ್ರತಗೊಂಡಿದ್ದವು. ಚಿಕ್ಕ ಡಿಕ್ಷನರಿ ಸೈಜಿನ ತೆಳ್ಳನೆ ಅಲ್ಯೂಮಿನಿಯಂ ಡಬ್ಬಿ, ತನ್ನ ಹೆಚ್ಚುತ್ತಿರುವ ಆಕಾರಕ್ಕೆ ಕಡಿವಾಣ ಹಾಕಿ, ಅವನು ಡಬ್ಬಿಯನ್ನು ತಿರುಗಿಸಿ, ಎಲ್ಲಾ ಕಡೆ ನೋಡಿದ. ಅದರ ಮೇಲೆಲ್ಲೂ ಹೆಸರು ಕಂಡುಬರಲಿಲ್ಲ. ಮೆಲ್ಲನೆ ಡಬ್ಬಿಯ ಮುಚ್ಚಳ ತೆಗೆದ. ಘಮ್ಮೆನ್ನುವ ವಾಸನೆ ಹೊರ ಹೊಮ್ಮಿತು. ಚೆನ್ನಾಗಿ ಹುರಿದು ಮಾಡಿದ ಒಳ್ಳೇ ಹಿಲ್ಸಾ ಮೀನಿನ ಪಲ್ಯ, ಪರಂಗೀಕಾಯಿ ಗೊಜ್ಜು. ಜಗಬಂಧು ಗೊಜ್ಜನ್ನು ಸ್ವಲ್ಪ ಬಾಯಿಗೆ ಹಾಕಿಕೊಂಡ. ರುಚಿ ಚೆನ್ನಾಗಿತ್ತು. ಎಲೈ ಮೂರ್ಖನೇ ಇಷ್ಟು ರುಚಿಯಾಗಿ, ನಿನಗಾಗಿ ಯಾರು ಅಡಿಗೆ ಮಾಡಿದ್ದರೋ ಏನೋ! ನಲ್ಮೆಯ ಪೆಂಡತಿಯೋ ಅಕ್ಕರೆಯ ಹೆತ್ತಮ್ಮನೋ...ಎರಡು ರೊಟ್ಟಿ, ಅದರ ಮಡಿಕೆಯೊಳಗೆ ಒಳ್ಳೆ ತುಪ್ಪ ಸಕ್ಕರೆ ಸವರಿದೆ. ಮೀನಿನ ಮೂಳೆ ಬೇರೆ ಮಾಡಿ ಸಾವಧಾನವಾಗಿ ಜಗದಾ ಪಲ್ಯ ತಿಂದ. ಚಪಾತಿಯನ್ನು ಗೊಜ್ಜಿನಲ್ಲಿದ್ದಿಕೊಂಡು ತಿಂದು ಮುಗಿಸಿದ. ಕೊನೆಗೆ ಆ ಡಬ್ಬಿಯಲ್ಲುಳಿದದ್ದು ಕೇವಲ ಮೂಳೆ ಮಾತ್ರ. ಆದರೆ ಕಥೆ ಹೇಳಲು ಕೊನೆಯಲ್ಲಿ ಅವು ಉಳಿಯೋದಿಲ್ಲ. ಅದರ ಬಗ್ಗೆ ಜಗಬಂಧು ಮೊದಲೇ ಕಾಳಜಿ ವಹಿಸಿದ್ದ. ಕಮೋಡಿನ ಕಪ್ಪು ಮುಚ್ಚಳ ತೆಗೆದು ಮೂಳೆಗಳನ್ನು ಅದರೊಳಗೆ ಚೆಲ್ಲಿ ಜೋರಾಗಿ ಫ್ಲಾಷ್ ನೀರು ಹರಿಸಿದ. ಆ ಟಿಫಿನ್‌ಬಾಕ್ಸ್ ಕೂಡ ಅವನ ಬಳಿಯೇನೂ ಉಳಿಯೋದಿಲ್ಲ. ಡಬ್ಬಿಯ ಮುಚ್ಚಳ ಮುಚ್ಚಿ ಅವನದನ್ನು ಕಮೋಡಿನ ಹಿಂಭಾಗದಲ್ಲಿ ಸಿಕ್ಕಿಸಿದ. ನಾಳೆ ಬೆಳಗಾ–ಗೆದ್ದು ಲ್ಯಾಟ್ರಿನ ತೊಳೆಯಲು ಬರುವ ಕೂಲಿಗೆ ಆಕಸ್ಮಿಕ ಆಶ್ಚರ್ಯಕರವಾದ ಉಡುಗೊರೆ.

ಚೆನ್ನಾಗಿ ಕೈ ತೊಳೆದು ಬೀಡಿ ಸೇದಬೇಕು ಎಂದು ಜಗಬಂಧು ಮನದಲ್ಲೇ ಅಂದುಕೊಂಡ. ಕೈ ತೊಳೆಯಲು ಲ್ಯಾಟ್ರಿನ್ ಬಾಗಿಲು ತೆರೆದ ಸೊಗಸಾದ ಸುಗ್ರಾಸ ಭೋಜನದ ನಂತರ ಹೊಮ್ಮುವ ತೇಗಿನಂತೆ ಅವನ ಗಂಟಲಿನಿಂದ ಮೆಲ್ಲನೆ ತೆಗೊಂದು ಹೊರ ಬರಲು ಪ್ರಯತ್ನಿಸಿತು. ಆದರೆ ಅದನ್ನು ಅರ್ಧಕ್ಕೆ ಕಪ್ಪು ಸಪೂರವಾದ ಕೈ ತಡೆಯಿತು. ಕರ್‍ರಗಿನ ದೇಹ ಹಣೆ ಸೋರುತ್ತಿದೆ. ತೀಕ್ಷ್ಣವಾದ ಕಣ್ಣುಗಳು ಜಗಬಂಧುವನ್ನೇ ದಿಟ್ಟಿಸಿ "ಟಿಫಿನ್‌ಬಾಕ್ಸ್ ಏನು ಮಾಡಿದಿರಿ ಸಾರ್?" ಎಂದಂತಾಯಿತು. ✡



ಇದರತ್ತ ಈಗ ಹೆಚ್ಚು ಲಕ್ಷ್ಯ ವಹಿಸುವುದು ಅತ್ಯಗತ್ಯ

# ಆಲ್ಕೋಹಾಲ್: ಇಂಧನ ಸಮಸ್ಯೆಗೊಂದು ಶಾಶ್ವತ ಪರಿಹಾರವೆ?

**ಯಮುನಾಬಾಯಿ ಆರ್. ರಾವ್**

ಈಚಲ ಹೆಂಡ, ಬಗನಿ ಕಳ್ಳು, ಈ ದೇಶೀ ಪೇಯಗಳು, ಬೀರ್, ವಿಸ್ಕಿ, ವೈನ್, ರಮ್, ಬ್ರಾಂದಿ ಇಂತಹ ವಿದೇಶೀ ಮದ್ಯಗಳು ಇವುಗಳೆಲ್ಲಕ್ಕೂ ಮಾದಕ ಗುಣ ಕೊಡುವ ಪದಾರ್ಥಗಳನ್ನು ಆಲ್ಕೋಹಾಲ್ ಎಂದು ಕರೆಯುತ್ತಾರೆಂದು ಬಹುಶಃ ಎಲ್ಲರಿಗೂ ಗೊತ್ತು. ರಾಸಾಯನಿಕವಾಗಿ ಇದರ ರಚನೆ ಏನು ?

ಹೈಡ್ರಾಕ್ಸಿ ಗುಂಪು (-OH) ಇರುವ ನೇರ ಸರಣಿಯ ಸಾವಯವ ಸಂಯುಕ್ತಗಳಿಗೆಲ್ಲ ರಾಸಾಯನಿಕವಾಗಿ ಆಲ್ಕೋಹಾಲ್ ಎಂದು ಹೆಸರು. ಅಂದರೆ ಅನೇಕ ಆಲ್ಕೋಹಾಲುಗಳಿರುತ್ತವೆ ಎಂದಾಯಿತು. ಇವುಗಳಲ್ಲಿ ಮುಖ್ಯ ಪರಿಚಿತವಾದವು ಮಿಥೈಲ್, ಈಥೈಲ್, ಬ್ಯುಟೈಲ್ ಮತ್ತು ಪ್ರೊಪೈಲ್ ಆಲ್ಕೋಹಾಲುಗಳು. ಆದರೆ ರೂಢಿಯಲ್ಲಿ ಸಾಮಾನ್ಯನೆ ಆಲ್ಕೋಹಾಲ್ ಎಂದರೆ ಈಥೈಲ್ ಆಲ್ಕೋಹಾಲ್ ಎಂದೇ ಅರ್ಥ.

ಪ್ರಾಚೀನಕಾಲದಿಂದ ಮಾನವನಿಗೆ ಆಲ್ಕೋಹಾಲ್ ಗೊತ್ತಿದೆ. ಪಾನೀಯವಾಗಿ ಹಾಗೂ ಔಷಧವಾಗಿ ಇದನ್ನು ಮನುಷ್ಯರು ಉಪಯೋಗಿಸುತ್ತಾ ಬಂದಿದ್ದಾರೆ. ಈಚೆಗೆ ಇದು ಉದ್ಯಮಗಳಲ್ಲಿ ವ್ಯಾಪಕವಾಗಿ ಮತ್ತು ರಾಸಾಯನಿಕ ಪದಾರ್ಥವಾಗಿ ಉಪಯೋಗವಾಗುತ್ತಿದೆ.

ಎಷ್ಟೋ ಕಾಲದಿಂದಲೂ ಕಾಕಂಬಿ, ಬೆಲ್ಲ, ತಾಳೆ ಜಾತಿಯ ಗಿಡಗಳ ರಸ, ಬೀಟ್ ಕಾಕಂಬಿ, ದ್ರಾಕ್ಷಿ ಮತ್ತಿತರ ಹಣ್ಣಿನ ರಸಗಳಂತಹ ಸಕ್ಕರೆ ಇರುವ ಪದಾರ್ಥಗಳನ್ನು ಹುದುಗಿಸಿ ಆಲ್ಕೋಹಾಲನ್ನು ಉತ್ಪಾದಿಸಲಾಗುತ್ತಿದೆ. ಈ ಉತ್ಪನ್ನ ಮುಖ್ಯವಾಗಿ ಕುಡಿಯಲು ಉಪಯೋಗವಾಗುತ್ತದೆ. ಆಲೂಗಡ್ಡೆ, ಟಾಪಿಯೋಕ, ಬಾರ್ಲಿ, ರೈ, ಮುಸುಕಿನ ಜೋಳ, ಅಕ್ಕಿ ಇಂತಹ ಪಿಷ್ಟ ಪದಾರ್ಥಗಳಿಂದಲೂ ಆಲ್ಕೋಹಾಲನ್ನು ತಯಾರಿಸುತ್ತಾರೆ. ಪೆಟ್ರೋಲಿಯಂ ಆಧರಿಸಿದ ಕೈಗಾರಿಕೆ ಅಭಿವೃದ್ಧಿಯಾದಂತೆ ಎಥಿಲೀನ್ ಅನಿಲ ಅಗ್ಗವಾಗಿ ಸಿಗಲು ಆರಂಭವಾಯಿತು. ಅದರಿಂದ ಆಲ್ಕೋಹಾಲನ್ನು ಸಂಯೋಜಿಸತೊಡಗಿದರು. ಇದರ ಉತ್ಪಾದನೆ ಸ್ವಾಭಾವಿಕ ಆಲ್ಕೊಹಾಲಿನ ಉತ್ಪಾದನೆಗಿಂತ ಹೆಚ್ಚಾಯಿತು. ಆದರೆ ಈಗ ಪೆಟ್ರೋಲಿಯಮ್ಮಿನ ಬೆಲೆ ವಿಪರೀತವಾಗಿ ಏರಿದೆಯಲ್ಲದೆ

ಮುಂದೆ ಇನ್ನೂ ಏರುವ ಸಾಧ್ಯತೆಯಿದೆ. ಇದಕ್ಕಿಂತ ಮುಖ್ಯವಾಗಿ ಭೂಗರ್ಭದಲ್ಲಿರುವ ಪೆಟ್ರೋಲಿಯಂ ಎಲ್ಲ ಒಂದಲ್ಲ ಒಂದು ದಿನ ತೀರಿಹೋಗುತ್ತದೆ. ಹೀಗಾಗಿ ಕೈಗಾರಿಕೆಗಳಿಗೆ ಬೇಕಾದ ಆಲ್ಕೋಹಾಲನ್ನು ಸಹ ಶರ್ಕರಪಿಷ್ಟ ಪದಾರ್ಥಗಳಿಂದ ತಯಾರಿಸಿಕೊಳ್ಳುವುದು ಅಪೇಕ್ಷಣೀಯವಷ್ಟೆ ಅಲ್ಲ. ಅವಶ್ಯವೂ ಆಗಿದೆ. ಇದನ್ನು ಬಿಟ್ಟರೆ, ಕಡಿಮೆ ಬೆಲೆಗೆ ಸಮೃದ್ಧವಾಗಿ ಸಿಗುವ ಸಾವಯವ ಕಚ್ಚಾ ಪದಾರ್ಥಗಳೆಂದರೆ ಸೆಲ್ಯುಲೋಸ್ ಮತ್ತು ಹೆಮಿಸೆಲ್ಯುಲೋಸುಗಳು. ಇವುಗಳಿಂದಲೂ ಸದ್ಯದಲ್ಲಿಯೇ ಆಲ್ಕೋಹಾಲ್ ತಯಾರಿಕೆಗೆ ಮೊದಲಾಗಬಹುದು. ಈಗ ಅದಿನ್ನೂ ಸಾಧ್ಯವಾಗಿಲ್ಲ.

ಈಗ ನಮ್ಮ ಮುಂದಿರುವ ಪ್ರಶ್ನೆಯೆಂದರೆ ಕೃಷಿ ಉತ್ಪನ್ನಗಳಿಗೆ ಹೋಲಿಸಿದಾಗ ಪೆಟ್ರೋಲಿಯಂ ಬಲು ತುಟ್ಟಿಯಾಗಿರುವುದರಿಂದ ಇಂಧನಕ್ಕಾಗಿ ಮತ್ತು ಕೈಗಾರಿಕೆಗಳಿಗಾಗಿ ಅದರ ಬದಲು ಉಪಯೋಗಿಸಲು ಬೇಕಾಗುವಷ್ಟು ಆಲ್ಕೋಹಾಲನ್ನು ಭಾರತದಲ್ಲಿ ಕೃಷಿ ಉತ್ಪನ್ನಗಳಿಂದ ಪಡೆದುಕೊಳ್ಳಲು ಸಾಧ್ಯವೇ ಎಂಬುದು. ಅನೇಕ ಉದ್ಯಮಗಳಲ್ಲಿ – ಅದರಲ್ಲೂ ಪ್ಲಾಸ್ಟಿಕ್ ತಯಾರಿಕೆಯಲ್ಲಿ – ಆಲ್ಕೋಹಾಲ್ ತುಂಬಾ ಬೇಕಾಗುತ್ತದೆ. ಇಲ್ಲಿ ಕುಡಿತದ ಮಾತೆತ್ತಿಲ್ಲ. ಏಕೆಂದರೆ ಕುಡಿಯುವುದಕ್ಕಾಗಿ ಹೆಂಡವನ್ನು ಹೇಗೋ ಜನ ಒದಗಿಸಿಕೊಂಡೇ ಒದಗಿಸಿಕೊಳ್ಳುತ್ತಾರೆ.

ಸಕ್ಕರೆ ಕಾರ್ಖಾನೆಗಳ ಉತ್ಪನ್ನವಾದ ಕಾಕಂಬಿ, ಮರಗೆಣಸು (ಟಾಪಿಯೋಕ) ಹಾಗೂ ಮುಸುಕಿನ ಜೋಳ ಇವೇ ಭಾರತದಲ್ಲಿ ಆಲ್ಕೋಹಾಲ್ ತಯಾರಿಸಲು ಸಿಗುವ ಕಚ್ಚಾ ಪದಾರ್ಥಗಳು. ನಮ್ಮ ದೇಶದಲ್ಲಿ ಈ ಮೂರು ಪದಾರ್ಥಗಳ ಒಟ್ಟು ಉತ್ಪಾದನೆ ಮತ್ತು ಪ್ರತಿ ಹೆಕ್ಟೇರಿಗೆ ಇವುಗಳ ಇಳುವರಿಗಳನ್ನು ಪಟ್ಟಿಯಲ್ಲಿ ನೋಡಬಹುದು. ಹೆಕ್ಟೇರ್‌ವಾರು ಇಳುವರಿ ದೃಷ್ಟಿಯಿಂದ ನೋಡಿದರೆ ಇವುಗಳಲ್ಲೆಲ್ಲ ಕಬ್ಬು ಬೆಳೆಯುವುದೇ ಅತ್ಯುತ್ತಮ ಎಂದು ಈ ಪಟ್ಟಿಯಿಂದ ಗೊತ್ತಾಗುತ್ತದೆ. ಬ್ರೆಜಿಲ್ ದೇಶದಲ್ಲಿ ಕಬ್ಬಿನ ಬೆಳೆಯ ಸ್ವಲ್ಪ ಭಾಗದಿಂದ ಸಕ್ಕರೆ ತಯಾರಿಸುವುದೇ ಇಲ್ಲ. ಅದರ ರಸದಿಂದ ನೇರವಾಗಿ ಆಲ್ಕೋಹಾಲನ್ನು ತಯಾರಿಸಿ ಅದನ್ನು ಹಾಗೆಯೇ ಇಂಧನವಾಗಿ ಅಥವಾ ಪೆಟ್ರೋಲಿನೊಡನೆ ಸೇರಿಸುವುದಕ್ಕಾಗಿ ಬಳಸುತ್ತಾರೆ. ಟಾಪಿಯೋಕ ಮತ್ತು ಮುಸುಕಿನ ಜೋಳದಿಂದ ಸಾಕಷ್ಟು ಪಿಷ್ಟ ಸಿಗುತ್ತಿದ್ದರೂ ಕಬ್ಬಿನ ಜೊತೆ ಹೋಲಿಸಿದಾಗ ಇವುಗಳಿಂದ ಶರ್ಕರ ಪಿಷ್ಟ ಒದಗುವುದು ಕಡಿಮೆಯೆ. ಟಾಪಿಯೋಕದ ಹೆಕ್ಟೇರುವಾರು ಇಳುವರಿ ಕಡಿಮೆ ಇದ್ದರೂ ಅದನ್ನು ಕಡಿಮೆ ಗುಣಮಟ್ಟದ ಭೂಮಿಯಲ್ಲೂ ಬೆಳೆಯಬಹುದು. ಅದಕ್ಕೆ ಅಷ್ಟೊಂದು ನೀರು ಮತ್ತು ಗೊಬ್ಬರ ಬೇಕಾಗುವುದಿಲ್ಲ. ಆದರೆ ಮುಸುಕಿನ ಜೋಳ, ಟಾಪಿಯೋಕಗಳಿಂದ ಆಲ್ಕೋಹಾಲ್ ತಯಾರಿಸುವಾಗ ಮೊದಲು ಪಿಷ್ಟವನ್ನು ಗ್ಲೂಕೋಸಾಗಿ ಪರಿವ-

| | ವಿಸ್ತೀರ್ಣ ಲಕ್ಷ ಹೆಕ್ಟೇರುಗಳಲ್ಲಿ | ಉತ್ಪಾದನೆ ಲಕ್ಷ ಟನ್ನುಗಳಲ್ಲಿ | ಇಳುವಳಿ ಟನ್/ಹೆಕ್ಟೇರ್ ಸರಾಸರಿ | ಇಳುವಳಿ ಟನ್/ಹೆಕ್ಟೇರ್ ಗರಿಷ್ಠ | ಸಕ್ಕರೆ ಅಥವಾ ಪಿಷ್ಟದ ಇಳುವರಿ ಟನ್/ಹೆಕ್ಟೇರು ಸರಾಸರಿ | ಸಕ್ಕರೆ ಅಥವಾ ಪಿಷ್ಟದ ಇಳುವರಿ ಟನ್/ಹೆಕ್ಟೇರು ಗರಿಷ್ಠ |
|---|---|---|---|---|---|---|
| ಕಬ್ಬು ೧ | ೩೭ | ೧೮ | ೫೦ | ೪೪೦ | ೫ | ೪ |
| ಮುಸುಕಿನ ಜೋಳ ೨ | ೬೬ | ೬೨ | ೧.೧ | ೪ | ೧೧* | ೪ |
| ಮರಗೆಣಸು ೩ | ೩೬ | ೬೦ | ೧೬ | ೩೨ | ೨–೩ | ೮ |

೧ ೧೨ ತಿಂಗಳ ಬೆಳೆ. ಹೆಚ್ಚು ನೀರು ಮತ್ತು ಗೊಬ್ಬರ ಬೇಕು.

೨ ೩–೪ ತಿಂಗಳ ಬೆಳೆ. ಹೆಚ್ಚು ನೀರು ಹಾಗೂ ಗೊಬ್ಬರ ಬೇಕಾಗಿಲ್ಲ.

೩ ೯-೧೧ ತಿಂಗಳ ಬೆಳೆ. ಹೆಚ್ಚು ನೀರು ಹಾಗೂ ಗೊಬ್ಬರ ಬೇಕಾಗಿಲ್ಲ.

* ವರ್ಷಕ್ಕೆ, ಎರಡು ಬೆಳೆ ಪ್ರಕಾರ.

ತಿನಿಸಬೇಕು. ಆ ಮೇಲೆ ಗ್ಲೂಕೋಸನ್ನು ಹುದುಗಿಸಬೇಕು. ಹೀಗೆ ಒಂದು ಕ್ರಿಯೆ ಈ ಸಂದರ್ಭದಲ್ಲಿ ಹೆಚ್ಚಾಗುವುದರಿಂದ ವೆಚ್ಚವೂ ಸ್ವಲ್ಪ ಹೆಚ್ಚುತ್ತದೆ. ಸದ್ಯಕ್ಕೆ ನಮ್ಮ ದೇಶದಲ್ಲಿ ಕಬ್ಬು, ಮುಸುಕಿನ ಜೋಳ ಮತ್ತು ಟ್ಯಾಪಿಯೋಕಗಳೆಲ್ಲದರದ್ದೂ ಹೆಕ್ಟೇರ್‌ವಾರು ಇಳುವರಿ ಕಡಿಮೆ ಇದೆ. ಇದನ್ನು ಶೇಕಡಾ ಕೇವಲ ೨೦ರಷ್ಟು ಹೆಚ್ಚಿಸಿದರೂ ಜನ ಅದನ್ನು ಆಹಾರಕ್ಕಾಗಿ ಈಗ ಉಪಯೋಗಿಸುತ್ತಿರುವುದಕ್ಕಿಂತ ಹೆಚ್ಚಾಗಿ ಉಪಯೋಗಿಸಿದರೂ ಇನ್ನೂ ಉಳಿದುಕೊಳ್ಳುವ ಸಾಧ್ಯತೆ ಇದೆ.

ಈಗ ಭಾರತದಲ್ಲಿ ಆಲ್ಕೋಹಾಲಿನ ಉತ್ಪಾದನೆ ಹೇಗೆ ನಡೆಯುತ್ತಿದೆ ಮತ್ತು ಅದನ್ನು ಯಾವುದಕ್ಕೋಸ್ಕರ ಉಪಯೋಗಿಸುತ್ತಿದ್ದಾರೆಂದು ಪರೀಕ್ಷಿಸೋಣ. ದೊಡ್ಡ ಪ್ರಮಾಣದಲ್ಲಿ ಆಲ್ಕೋಹಾಲ್ ತಯಾರಿಸಲು ಉಪಯೋಗಿಸುತ್ತಿರುವ ಕಚ್ಚಾ ಸಾಮಗ್ರಿ ಕಾಕಂಬಿ. ವೈನ್, ಹೆಂಡ ಮತ್ತಿತರ ಆಲ್ಕೊಹಾಲಿರುವ ಪೇಯಗಳ ತಯಾರಿಕೆ ಅಷ್ಟಿಷ್ಟು ಸಣ್ಣ ಪ್ರಮಾಣದಲ್ಲಿ ನಡೆಯುತ್ತಿದ್ದರೂ ಆಲ್ಕೊಹಾಲಿಗೆ ಅತಿ ಮುಖ್ಯ ಮೂಲ ಪದಾರ್ಥ ಕಾಕಂಬಿಯೇ. ನಮ್ಮಲ್ಲಿ ಈಗ ೨೦ ಲಕ್ಷ ಟನ್ ಕಾಕಂಬಿ ತಯಾರಾಗುತ್ತಿದೆ. ಇದಷ್ಟೂ ಸಕ್ಕರೆ ಕಾರ್ಖಾನೆಗಳಲ್ಲಿ ಬರುವ ಉಪ ಉತ್ಪನ್ನ. ನಮ್ಮಲ್ಲಿ ಬೆಳೆಯುವ ಕಬ್ಬಿನ ಬಹುಭಾಗ ಸಕ್ಕರೆ ಕಾರ್ಖಾನೆಗಳಿಗೆ ಬರುವುದೇ ಇಲ್ಲ. ಅಲ್ಲಲ್ಲೇ ಸಣ್ಣ ಪ್ರಮಾಣದಲ್ಲಿ ಬೆಲ್ಲ ಮತ್ತು ಖಂಡಸಾರಿ ಸಕ್ಕರೆ ತಯಾರಿಸಲು ಉಪಯೋಗವಾಗಿ ಹೋಗುತ್ತದೆ. ದೊಡ್ಡ ಕಾರ್ಖಾನೆಗಳಲ್ಲಿ ೪೦ ಲಕ್ಷ ಟನ್ ಸಕ್ಕರೆ ಉತ್ಪಾದಿಸಲ್ಪಟ್ಟರೆ ಸುಮಾರು ಇದರ ಮೂರರಷ್ಟು ಬೆಲ್ಲ, ಖಂಡಸಾರಿ ತಯಾರಾಗುತ್ತವೆ. ಸಣ್ಣ ಘಟಕಗಳ ಕಾಕಂಬಿ ಆಲ್ಕೊಹಾಲಿನ ತಯಾರಿಕೆಗೆ ಪ್ರಯೋಜನವಾಗುತ್ತಿಲ್ಲ. ಒಟ್ಟು ನಮ್ಮ ದೇಶದಲ್ಲಿ ಇರುವ ಕಾಕಂಬಿಯೆಲ್ಲವನ್ನೂ ಉಪಯೋಗಿಸಿದರೆ ೬೦ ಕೋಟಿ ಲೀಟರ್ ಆಲ್ಕೊಹಾಲ್ (ಸುಮಾರು ಐದು ಲಕ್ಷ ಮೆಟ್ರಿಕ್ ಟನ್) ತಯಾರಿಸಲು ಸಾಧ್ಯವಾಗಬೇಕು. ಇದೂ ಅಷ್ಟು ತೃಪ್ತಿಕರವಲ್ಲ. ಆದರೆ ಈಗ ನಮ್ಮಲ್ಲಿ ಸುಮಾರು ೪.೪೦ ರಿಂದ ೪.೫೦ ಕೋಟಿ ಲೀಟರ್ ಅಂದರೆ ೩.೬ ಲಕ್ಷ ಟನ್‌ಗಳಷ್ಟು ಆಲ್ಕೋಹಾಲ್ ಮಾತ್ರ ಉತ್ಪಾದಿತವಾಗುತ್ತಿದೆ. ಕಾಕಂಬಿಯನ್ನು ಈ ಉದ್ದೇಶಕ್ಕಾಗಿ ಸಾಗಿಸುವುದು ಕಷ್ಟ ಎಂಬ ಭಾವನೆಯಿದೆ; ಅಂದರೆ ಅದಕ್ಕೆ ತಗಲುವ ಖರ್ಚಿಗೆ ಪ್ರತಿಫಲ ಸಾಲದು ಎನ್ನುವುದೇ ಇದಕ್ಕೆ ಕಾರಣವಿರಬೇಕು. ದೇಶದ ಹೊರಗೆ ಕಾಕಂಬಿಗೆ ಒಳ್ಳೆ ಬೆಲೆ ಇರುವುದರಿಂದ ಸ್ವಲ್ಪ ಕಾಕಂಬಿ ರಫ್ತಾಗುತ್ತಿದೆ. ಇದೆಲ್ಲ ಏನೇ ಇರಲಿ, ಈಗ ಸಿಗುವ ಕಾಕಂಬಿಯಿಂದಲೂ ಇನ್ನೂ ೧॥ ಕೋಟಿ ಲೀಟರ್ ಆಲ್ಕೊಹಾಲ್, ತಯಾರಿಸಿಕೊಳ್ಳಬಹುದು. ಹೆಕ್ಟೇರಿಗೆ ಕಬ್ಬಿನ ಇಳುವರಿ, ಅಂದರೆ, ಹೆಕ್ಟೇರಿಗೆ ಬರುವ ಸಕ್ಕರೆ ಮತ್ತು ಕಾಕಂಬಿಗಳ ಪ್ರಮಾಣ ಹೆಚ್ಚಾದರೆ ಆಲ್ಕೋಹಾಲ್ ತಯಾರಿಸಲು ಒಳ್ಳೆ ಪ್ರೋತ್ಸಾಹ ಸಿಗುತ್ತದೆ. ಹೀಗಾದಲ್ಲಿ ದೇಶಾದ್ಯಂತ ಸುಮಾರು ಎರಡು ಸಾವಿರ ಆಲ್ಕೋಹಾಲ್ ಘಟಕಗಳನ್ನು ಸ್ಥಾಪಿಸಿ ಇನ್ನೂ ಮೂರು ವರ್ಷಗಳಲ್ಲಿ ೧.೨೦ ಕೋಟಿ ಟನ್ನುಗಳಷ್ಟು ಆಲ್ಕೋಹಾಲನ್ನು ಉತ್ಪಾದಿಸಬಹುದೆಂದೂ ಇದರಿಂದ ನಮ್ಮ



"ಬರೀ ಆಶ್ವಾಸನೆ ಮಾತ್ರ ಕೊಡ್ತೀನಿ ಅಂತ-

ವಾಗುವುದೆಂದೂ ಮುಂಬಯಿಯಲ್ಲಿರುವ ವಿಜ್ಞಾನಿ ಡಾ. ಮಾಲ್ಷೆ ಹೇಳುತ್ತಾರೆ. ಆದರೆ ಇಂದಿನ ಪರಿಸ್ಥಿತಿಗೆ ಈ ಅಂದಾಜು ಮಿತಿ ಮೀರಿದ್ದೆಂದು ಹೇಳಬೇಕಾಗುತ್ತದೆ. ಮೊದಲು ಇದರಲ್ಲಿ ತೊಡಗಿಸಲು ತುಂಬಾ ಬಂಡವಾಳ ಬೇಕು. ಮೂಲ ಕಚ್ಚಾ ಪದಾರ್ಥ ತಕ್ಕಷ್ಟು ಬೇಕು. ೧.೨೦ ಕೋಟಿ ಟನ್ ಆಲ್ಕೋಹಾಲನ್ನು ತಯಾರಿಸಲು ೨.೪೦ ಕೋಟಿ ಟನ್ ಕಾಕಂಬಿ ಬೇಕು. ಅಂದರೆ ಈಗ ಉತ್ಪಾದಿಸುತ್ತಿರುವುದರ ೧೨ ಪಟ್ಟಿನಷ್ಟು. ಇದಕ್ಕೆ ತಕ್ಕಷ್ಟು ಜಮೀನು ಎಲ್ಲಿದೆ? ಕಬ್ಬಿನ ಕಾಕಂಬಿಯ ಬದಲು ವ್ಯರ್ಥವಾಗುತ್ತಿರುವ ಕೆಟ್ಟುಹೋದ ಕಾಳುಗಳನ್ನೂ ಸೆಲ್ಯುಲೋಸ್ ಪದಾರ್ಥಗಳನ್ನೂ ಇದಕ್ಕಾಗಿ ಉಪಯೋಗಿಸಬಹುದೆಂದು ಮಾಲ್ಷೆಯವರು ಹೇಳುತ್ತಾರೆ. ಆದರೆ ಹೀಗೆ ಸಿಗಬಹುದಾದ ಕಾಳುಗಳ ಪ್ರಮಾಣಕ್ಕೂ ಒಂದು ಮಿತಿ ಇದೆ. ಸೆಲ್ಯುಲೋಸಿನಿಂದ ಆಲ್ಕೋಹಾಲ್ ತಯಾರಿಕೆಗೆ ಇನ್ನೂ ಸಂಶೋಧನೆಗಳು ನಡೆದು, ಯುಕ್ತ ಕ್ರಿಯಾ ವಿಧಾನವೊಂದು ರೂಪುಗೊಳ್ಳಬೇಕು.

ಪೆಟ್ರೋಲಿನ ಜೊತೆಗೆ ಮಿಶ್ರ ಮಾಡಿಯೋ ಅಥವಾ ಶುದ್ಧ ಆಲ್ಕೋಹಾಲನ್ನು ಹಾಗೆಯೇ ನೇರವಾಗಿಯೋ ಇಂಧನವಾಗಿ ಬಳಸುವುದು ಪ್ರಪಂಚದಲ್ಲಿ ಮುಂದೆ ಸಾಮಾನ್ಯವಾಗಬಹುದು. ಮುಂದಿನ ಐದಾರು ವರ್ಷಗಳಲ್ಲಿ ಮೊದಲು ಆಲ್ಕೋಹಾಲ್ ಪೆಟ್ರೋಲ್ ಮಿಶ್ರಣವೇ ಬಳಕೆಗೆ ಬರುತ್ತದೆಯೆಂದುಕೊಂಡು ಲೆಕ್ಕ ಹಾಕೋಣ. ನಮ್ಮ ದೇಶದಲ್ಲಿ ಉಪಯೋಗಿಸುತ್ತಿರುವ ಪೆಟ್ರೋಲಿಯಂ ಉತ್ಪನ್ನಗಳ ಒಟ್ಟು ಪ್ರಮಾಣದ ಶೇಕಡಾ ೫ಭಾಗ ಮಾತ್ರ ಪೆಟ್ರೋಲ್ ರೂಪದಲ್ಲಿ ಉಪಯೋಗವಾಗುತ್ತದೆ. ೧೯೭೭-೭೮ರಲ್ಲಿ ೧೫ ಲಕ್ಷ ಟನ್‌ಗಳಷ್ಟು ಪೆಟ್ರೋಲ್ ಖರ್ಚಾಯಿತು. ಇದರಲ್ಲಿ ಶೇಕಡಾ ೨೦ರಷ್ಟು ಆಲ್ಕೋಹಾಲ್ ಮಿಶ್ರಣವಾಗಬೇಕೆಂದರೆ ೪ ಲಕ್ಷ ಟನ್ನುಗಳಷ್ಟು ಶುದ್ಧ ಆಲ್ಕೋಹಾಲ್— ಅಂದರೆ ನೀರಿನಂಶ ಎಳ್ಳಷ್ಟೂ ಇಲ್ಲದ ಶುದ್ಧ ಆಲ್ಕೋಹಾಲ್ – ಬೇಕು. ಇದು ಹೆಚ್ಚು ಕಡಿಮೆ ಈಗ ನಮ್ಮಲ್ಲಿ ತಯಾರಾಗುತ್ತಿರುವ ಆಲ್ಕೋಹಾಲಿನ ಪ್ರಮಾಣಕ್ಕೆ –

ಲೀಟರುಗಳು– ಸಮ. ಈಗಾಗಲೇ ಅನೇಕ ರಾಸಾಯನಿಕ ಉದ್ಯಮಗಳಿಗೆ ಆಲ್ಕೋಹಾಲೇ ಆಧಾರವಾಗಿದೆ. ಹೀಗಿರುವುದರಿಂದ ಈ ಕ್ಷಣದಲ್ಲಿ ದೇಶಾದ್ಯಂತ ಪೂರ್ತಿ ಶುದ್ಧ ಆಲ್ಕೋ-ಹಾಲ್ ಉಪಯೋಗ ಜಾರಿಗೆ ತರುವುದನ್ನು ಚಿಂತಿಸಲೂ ಈಗ ಸಾಧ್ಯವಿಲ್ಲ. ರಾಸಾಯನಿಕ ಉದ್ಯಮಗಳಲ್ಲಿ ಉಪಯೋಗಿಸಿದ ಮೇಲೆ ತಕ್ಕಷ್ಟು ಆಲ್ಕೋಹಾಲ್ ಇಂಧನಕ್ಕಾಗಿ ಸಿಗುವುದೇ ಎಂಬ ದೊಡ್ಡ ಪ್ರಶ್ನೆ. ಇದೆಲ್ಲ ಗಮನಿಸಿ ಮುಂದೇನು ಮಾಡಲು ಸಾಧ್ಯ ಎಂದು ನೋಡೋಣ.

ಕಬ್ಬು, ಮುಸುಕಿನ ಜೋಳ, ಮರಗೆಣಸು, ಮತ್ತು ಗೆಣಸುಗಳನ್ನು ಹೆಚ್ಚು ಹೆಚ್ಚಾಗಿ ಬೆಳೆಸಿದರೆ ಆಲ್ಕೋಹಾಲಿನ ಉತ್ಪಾದನೆಯೂ ಹೆಚ್ಚುತ್ತದೆ. ಹೀಗೆ ಬೆಳೆದ ಕಬ್ಬಿನಲ್ಲಿ ಎಷ್ಟೋ ಭಾಗವನ್ನು ಸಕ್ಕರೆ ಮಾಡಲು ಉಪಯೋಗಿಸದೆ ವೈಜಲಿನಲ್ಲಿ ಮಾಡುವಂತೆ ನೇರವಾಗಿ ಆಲ್ಕೋ-ಹಾಲ್ ತಯಾರಿಸಲು ಉಪಯೋಗಿಸಬಹುದು ಎಂದು ಕೆಲವರು ಹೇಳುತ್ತಾರೆ. ಗೆಣಸು, ಮರಗೆಣಸು ಮತ್ತು ಮುಸುಕಿನ ಜೋಳಗಳು ನಿಜ



"ನೀವು ಅಪ್ಪಟ ಗಾಂಧಿವಾದೀ ಅನ್ನೋದು ನಂಗೂ ಗೊತ್ತು. ಆದರೂ ಒಂದು ಕೆನ್ನೆಗೆ, ಹೊಡೆದಾಗ, ಇನ್ನೊಂದು ಕೆನ್ನೆ ತೋರಿಸಬಾರದಿತ್ತು ...ಎರಡರ

ವಾಗಿ ಆಹಾರ ಪದಾರ್ಥಗಳು. ಭವಿಷ್ಯದಲ್ಲಿ ಇವನ್ನು ಆಹಾರದಲ್ಲಿ ಬಳಸುವುದೂ ಹೆಚ್ಚುತ್ತದೆ. ಇವುಗಳಿಂದ ಸಿದ್ಧ ಆಹಾರವಸ್ತುಗಳ ತಯಾರಿಕೆಯೂ ಹೆಚ್ಚುತ್ತದೆ. ಇದಕ್ಕೆಲ್ಲ ಆಗಿ ಮಿಕ್ಕದ್ದನ್ನು ಅಥವಾ ಈ ಕೈಗಾರಿಕೆಗಳಲ್ಲಿ ಬರುವ ವರ್ಜ್ಯ ಪದಾರ್ಥಗಳನ್ನು ಮಾತ್ರ ಆಲ್ಕೋಹಾಲಿಗೆ ಉಪಯೋಗಿಸಬಹುದು. ಇವುಗಳಲ್ಲೆಲ್ಲಾ ಟಾಪಿಯೋಕ ಬೆಳೆಯುವುದೇ ಹೆಚ್ಚು ಆಶಾದಾಯಕವಾದದ್ದು. ಏಕೆಂದರೆ ಈ ಸಸ್ಯ ಪ್ರತಿಕೂಲ ಪರಿಸ್ಥಿತಿಗಳನ್ನೆದುರಿಸಿ ಬೆಳೆಯುತ್ತದೆ ಮತ್ತು ಇಳುವರಿಯೂ ಹೆಚ್ಚು. ಕೃಷಿ ವ್ಯವಸ್ಥೆ ಬಹುವಾಗಿ ಅಭಿವೃದ್ಧಿ ಹೊಂದಿರುವ ಅಮೇರಿಕದಲ್ಲಿ ಮುಸುಕಿನ ಜೋಳವನ್ನು ಹಿಂದೆಂದೂ ಕಾಣದಷ್ಟು ಬೃಹತ್ಪ್ರಮಾಣದಲ್ಲಿ ಬೆಳೆಯುತ್ತಿದ್ದಾರೆ. ನಮ್ಮ ದೇಶದಲ್ಲಿ ಎಲ್ಲೋ ಕೆಲವೆಡೆಗಳಲ್ಲಿ ಮಾತ್ರ ಹೀಗೆ ಮಾಡಲು ಸಾಧ್ಯ. ಮುಸುಕಿನ ಜೋಳದಲ್ಲಿ ವರ್ಷಕ್ಕೆರಡು ಬೆಳೆ ತೆಗೆಯಬಹುದು. ಇವೆಲ್ಲ ಸದ್ಯದಲ್ಲೇ ಜಾರಿಗೆ ತರಬಹುದಾದ ಕ್ರಮಗಳು. ಆದರೂ ಇನ್ನು ಮುಂದೆ ಇವುಗಳಿಗಿಂತ ಆಶಾದಾಯಕವಾದುವೆಂದರೆ ಸೆಲ್ಯುಲೋಸ್ ಇರುವ ವರ್ಜ್ಯ ಉತ್ಪನ್ನಗಳು. ಉದಾಹರಣೆಗೆ ರಸ ತೆಗೆದ ಕಬ್ಬು, ಹುಲ್ಲು, ಮರದ ಹೊಟ್ಟು, ಇತ್ಯಾದಿ. ಇವುಗಳು ಕೂಡ ಈಗ ಅಧಿಕ ಪ್ರಮಾಣದಲ್ಲಿ ಸಿಗುವುದು ಸಂಶಯ.

ಇವುಗಳಲ್ಲಿ ಮುಖ್ಯವಾದ ಅಂಶವೆಂದರೆ ಉಪಯುಕ್ತವಾದ ಯಾವ ಸಾವಯವ ರಾಸಾಯನಿಕಗಳನ್ನೂ ಇವುಗಳಿಂದ ಈಗ ತಯಾರಿಸುತ್ತಿಲ್ಲ. ಇವುಗಳ ಉಪಯೋಗ ಮತ್ತೆ ಯಾವ ಉದ್ಯಮಗಳಿಗೂ ಅಡ್ಡಬರುವುದಿಲ್ಲ. ಸೆಲ್ಯುಲೋಸನ್ನು ಕಿಣ್ವ ಕ್ರಿಯೆಗೆ ಒಳಪಡಿಸಿ ಗ್ಲೂಕೋಸ್ ಪಡೆಯುವುದು ಲಾಭದಾಯಕವಾಗಬಹುದೆಂದು ಭಾರತದ ಕೆಲವು ಪ್ರಯೋಗಶಾಲೆಗಳಲ್ಲಿ ತಿಳಿದುಬಂದಿದೆ. ಈ ಜಾಡನ್ನೇ ಹಿಡಿದು ತೀವ್ರ ಪ್ರಯತ್ನ ಮಾಡಿ ಈ ಕ್ರಿಯೆಯನ್ನು ಉದ್ಯಮ ಮಟ್ಟಕ್ಕೇರಿಸಿದರೆ ಆಲ್ಕೋಹಾಲ್ ತಯಾರಿಕೆಯೇ ಅಲ್ಲದೆ ಮತ್ತೆ ಬೇರೆ ಎಷ್ಟೋ ಉತ್ಪಾದನೆಗಳಿಗೆ ಗ್ಲೂಕೋಸ್ ಸಿಗುವಂತಾಗುತ್ತದೆ. ಇಂಧನಕ್ಕಾಗಿಯೇ ಮರಗಳ ತೋಪುಗಳನ್ನು ಬೆಳೆಸಬಹುದು. ಬೆಂಗಳೂರಿನ ಹತ್ತಿರ ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಹೀಗೆ ಮಾಡಿದ್ದರು. ಈಗಲೂ ಸ್ವಲ್ಪ ಮಟ್ಟಿಗೆ ಈ ಕಾರ್ಯ ನಡೆದಿದೆ. ಈಚೆಗೆ ಅಮೇರಿಕದಲ್ಲಿ ಇದರ ಕಡೆ ವಿಶೇಷ ಗಮನ ಕೊಟ್ಟಿದ್ದಾರೆ. ಇವೆಲ್ಲ ಕ್ರಮಗಳು ಕೃಷಿ ಹಾಗೂ ಅರಣ್ಯ ಶಾಸ್ತ್ರಗಳನ್ನು ಆಧರಿಸಿವೆ. ಕೆಳ ದರ್ಜೆಯ ಜಮೀನು ಈಗ ಏನೂ ಉಪಯೋಗವಿಲ್ಲವೆಂದು ಪರಿಗಣಿಸುತ್ತಿರುವುದು ಇವುಗಳಿಗೆ ಪ್ರಯೋಜನವಾಗಬಹುದು. ಈ ಕ್ರಮಗಳು ಮೇಲಿಂದ ಮೇಲೆ ಶಕ್ತಿಯನ್ನು ಕೊಡುತ್ತಾ ಹೋಗುವ ಶಾಶ್ವತ ಇಂಧನ ಮೂಲಗಳು.

ಒಟ್ಟಿನಲ್ಲಿ ಹೇಳುವುದಾದರೆ ಭಾರತದಲ್ಲಿ ಸದ್ಯಕ್ಕೆ ಭಾಗಶಃ ಪೆಟ್ರೋಲ್–ಆಲ್ಕೋಹಾಲ್ ಮಿಶ್ರಣದ ಬಳಕೆ ಜಾರಿಗೆ ತರಬಹುದಷ್ಟೆ. ದೇಶಾದ್ಯಂತ ಪೂರ್ತಿ ತರಲು ಪರಿಸ್ಥಿತಿ ಅನುಕೂಲವಾಗಿಲ್ಲ. ಎಷ್ಟೋ ರಾಸಾಯನಿಕ ಉದ್ಯಮಗಳಿಗೆ ಆಲ್ಕೋಹಾಲೇ ಮುಖ್ಯವಾದ ಮೂಲ ಸಾಮಗ್ರಿಯಾಗಿದೆ. ಅವುಗಳಿಗೆ ಮತ್ತು ಇಂಧನಕ್ಕೆ ಸಾಕಾಗುವಷ್ಟು ಆಲ್ಕೋಹಾಲ್ ಈಗ ಇಲ್ಲಿ ತಯಾರಾಗುತ್ತಿಲ್ಲ. ಸಾಕಷ್ಟು ತಯಾರಿಸುವ ಮುನ್ನ ಬಹಳ ಕಾರ್ಯ ನಡೆಯಬೇಕಾಗಿದೆ.ಅದಕ್ಕೆ ಈಗಲೇ ತೊಡಗುವುದು ಅಪೇಕ್ಷಣೀಯ. ★

## ಭಯಕ್ಕೆ ಕಾರಣ

ಯುವತಿ : ನನಗೆ ಕತ್ತಲೂ ಅಂದ್ರೆ ತುಂಬಾ ಭಯ ಕಣ್ರಿ...

ಯುವಕ : ಏಕೆ? ನಾನು ಜೊತೇಲಿ ಇಲ್ವೆ?

ಯುವತಿ : ನೀವು ಜೊತೇಲಿ ಇದಿರಾ ಅಂತ್ಲೇ ನನಗೆ ಭಯಾರೀ...

— ಎಸ್. ವಿಶ್ವನಾಥ

ಕ್ಷಣಾರ್ಧದಲ್ಲಿ ಅದು ಸುಂದರ ತಾಣಗಳನ್ನು
ಹಾಳು ಮಸಣವನ್ನಾಗಿಸಿತು

# ಬೆಂಕಿಯ ಮಳೆ
# ಬೂದಿಯ ಮಳೆ...


೧೩೦ ಅಡಿ ಎತ್ತರಕ್ಕೆ, ಚಾಚಿದ ಬೆಂಕಿಯ ನಾಲಿಗೆ

೧೯೮೦ ರ ಮೇ ಹದಿನೆಂಟು. ರವಿವಾರ. ಮತ್ತೆ ರವಿವಾರವೆಂದ ಮೇಲೆ ಕೇಳಬೇಕೆ? ಇತರ ಎಲ್ಲ ಕಡೆಗಳಲ್ಲಿಯೂ ಕಂಡು ಬರುವ ಹಾಗೆ ಅಮೇರಿಕದ ಯಾಕಿಮಾ ನಗರದಲ್ಲೂ ಉತ್ಸಾಹದ ವಾತಾವರಣವಿತ್ತು. ಆದರೆ ಈ ಉತ್ಸಾಹ ಅಲ್ಪಾವಧಿಯದಾಗಿತ್ತು. ಬೆಳಗಿನ ಸುಮಾರು ಒಂಭತ್ತೂವರೆಯ ಹೊತ್ತಿಗೆ ಪಶ್ಚಿಮದಿಂದ ಪರ್ವತಾಕಾರದ ಕಪ್ಪು ಮೋಡವೊಂದು ತೇಲಿಕೊಂಡು ಬಂತು. ಅದರ ಹಿಂದೆಯೆ ಮತ್ತೊಂದು; ಅದರ ಹಿಂದೆ ಮಗದೊಂದು. ಕೆಲವೇ ನಿಮಿಷಗಳಲ್ಲಿ ಆಕಾಶವೆಲ್ಲ ಮೇಘಾಚ್ಛಾದಿತವಾಗಿ ನಡುಹಗಲಲ್ಲೇ ಕತ್ತಲು ಕವಿದಂತಾಯಿತು. ಆದರೆ ಸ್ವಲ್ಪ ಕಾಲ ಮಾತ್ರ. ಸೂರ್ಯನ ಕಿರಣಗಳು ಆ ಮೋಡಗಳಿಂದ

ತೂರಿಕೊಂಡು ಬಂದು ನಗರದ ತುಂಬೆಲ್ಲಾ ಮಂದವಾದ ಪ್ರಕಾಶವನ್ನು ಪಸರಿಸಿದವು. ಎಲಾ, ಇದೇನು, ಸಂಜೆಯಾದಂತೆಯೆ ಕಾಣು ತ್ತಿದೆಯಲ್ಲ, ಇದೆಂಥ ವಿಚಿತ್ರ? ಎಂದು ಅಲ್ಲಿನ ಜನ ತಲೆ ತುರಿಸಿಕೊಂಡರು. ಆದರೆ ಅವರು ಎಂದಿಗೂ ಕಂಡು ಕೇಳರಿಯದ ವಿಚಿತ್ರ ಇನ್ನೂ ಕಾದಿತ್ತು. ಕೆಲ ಸಮಯದ ಬಳಿಕ ಆಕಾಶದಿಂದ ನವಿರಾದ ಬೂದಿ ಬೀಳತೊಡಗಿತು. ಜನ ಮೂಗು ಬಾಯಿ ಗಳನ್ನು ಕರವಸ್ತ್ರದಿಂದ ಮುಚ್ಚಿಕೊಂಡರು. ಹದಿನಾರು ಗಂಟೆಗಳ ಅವಧಿಯಲ್ಲಿ ಮೂರು ಇಂಚಿನಷ್ಟು ದಪ್ಪವಾದ ಬೂದಿ ನಗರದ ತುಂಬಾ ಬಿದ್ದಿತ್ತು. ಪ್ರಕೃತಿಯ ಈ ವೈಚಿತ್ರ್ಯ ನಗರದಿಂದ [illegible] ದೂರವಿರುವ ಸೇಂಟ್ ಹೆಲೆನ್ [illegible] ನಡೆಸಿದ ರುದ್ರತಾಂಡವದಿಂದಾ ಗಿತ್ತು. 'ಪರ್ವತಾಗ್ರ ಸಿಡಿದುಹೋಗಿ ಲಾವಾ ರಸ ಚಿಮ್ಮುತ್ತಿದೆ, ಜ್ವಾಲಾಮುಖಿಯಿಂದ ಪಾರಾ ಗಲು ಆದಷ್ಟು ಬೇಗ ಸ್ಥಳವನ್ನು ಖಾಲಿ ಮಾಡಿ,' ಎಂದು ರೇಡಿಯೋ ಬಿತ್ತರಿಸಿತು.

ಆದರೆ ಪರ್ವತದ ಅಡಿಯಲ್ಲಿ ವಾಸಿಸುತ್ತಿದ್ದ ಹ್ಯಾರಿ ಟ್ರೂಮನ್ ಇದಾವುದನ್ನೂ ಗಣನೆಗ [illegible] ಹೆಲೆನ್ [illegible] ಗಳಷ್ಟು ಎತ್ತರಕ್ಕೆ ಲಾವಾರಸವನ್ನು ಚಿಮ್ಮು ತ್ತಿತ್ತು. ನೆರೆಯ ನಗರದ ಶರೀಫನ ಪ್ರತಿನಿಧಿ ಗಳು ಬಂದು ಕಾಲ ಮೀರುವ ಮೊದಲೇ ಅಲ್ಲಿಂದ ಪಾರಾಗಬೇಕೆಂದು ಪರಿಪರಿಯಾಗಿ ಹೇಳಿದರೂ ಕೇಳಲಿಲ್ಲ. ನಿಜ, ಪರ್ವತದಡಿಯಲ್ಲಿ ಸರೋವರ ತೀರದಲ್ಲಿ ನಿಸರ್ಗದ ಸುಂದರ ತಾಣದಲ್ಲಿ ಕಳೆದ ಐವತ್ತು ವರ್ಷಗಳಿಂದಲೂ ವಾಸಿಸುತ್ತಿದ್ದ ಟ್ರೂಮನ್ನನಿಗೂ ಪರಿಸರಕ್ಕೂ ಒಂದು ರೀತಿಯ ತಾದಾತ್ಮ್ಯ ಬೆಳೆದುಕೊಂಡುಬಂದಿತ್ತು. ತನ್ನ ಗೆಳೆಯರೊಂದಿಗೆ ಮಾತಾಡುತ್ತಾ ಒಮ್ಮೆ ಆತ, "ಊಹುಂ, ಎಂಥ ಪ್ರಸಂಗಗಳಲ್ಲಿಯೂ ನಾನು ಈ ಕುಟೀರವನ್ನು ಬಿಡುವುದಿಲ್ಲ. ಒಂದು ದಿನ ಕೂಡ ನಾನು ಇದನ್ನು ಬಿಟ್ಟಿರಲು ಸಾಧ್ಯ ವಿಲ್ಲ. ಈ ಪರ್ವತ ಬೇರೆಯಲ್ಲ, ನಾನು ಬೇರೆ ಯಲ್ಲ. ಈ ಪರ್ವತ ನನ್ನ ಜೀವನದಲ್ಲಿ ಅಷ್ಟು [illegible] ಹೋಗಿದೆ," ಎಂದು ಹೇಳಿದ್ದ. ಅಂತೆಯೇ ಅವನಿಂದ ನಿಯತಿ ಹಾಗೆ ಹೇಳಿಸಿತ್ತು. [illegible]ದ್ದವರನ್ನು ಪಾರುಮಾಡಬೇಕೆಂಬ [illegible] ಸ್ವಯಂಸೇವಕರು ಆ ಸ್ಥಳಕ್ಕೆ [illegible] ವೇಳೆಗಾಗಲೆ ಅವನ ಕುಟೀರ ಎರಡುನೂರು ಅಡಿಗಳಷ್ಟು ಮಣ್ಣಲ್ಲಿ ಹೂತುಹೋಗಿತ್ತು. [illegible] ಹೇಳಿದ ಮಾತು ಯಥಾ ರ್ಥವಾಗಿತ್ತು. ಪ್ರಕೃತಿಮಾತೆ ತನ್ನ ಈ ಮುದ್ದು ಮಗನನ್ನು ಮತ್ತೆ ತನ್ನ ಒಡಲಿಗೆ ಸೇರಿಸಿ-ಕೊಂಡಿದ್ದಳು.

[illegible] ಹೆಲೆನ್ [illegible] ವೈಲುಗಳಷ್ಟು ವಿಶಾಲವಾದ ಪ್ರದೇಶವನ್ನು



ಸುಂದರ ತಾಣ

ಮುಗ್ಗಾಗಿ ನದಿಯ ಪಾತ್ರ ಎಂಟು ಪಟ್ಟು ಹೆಚ್ಚಿ ಆ ಪ್ರದೇಶದಲ್ಲಿ ವಾಸಿಸುವವರಲ್ಲಿ ಹೆದರಿಕೆಯನ್ನು ಹುಟ್ಟಿಸಿತು. ಹೆದರಿಕೆ ಸ್ವಾಭಾವಿಕವಾಗಿತ್ತು. ಹೆದರಿಕೆ ಹೆಚ್ಚಿದಂತೆಲ್ಲ ಜನರು ಮನೆಮಾರುಗಳನ್ನು ತೊರೆದು ಓಡಿಹೋಗಿದ್ದೂ ಸರಿಯಾಗಿಯೆ ಇತ್ತು. ಕೆಲ ಕಾಲದಲ್ಲಿ ಮೃಣ್ಮಯವಾದ ನದಿ ವೇಗವಾಗಿ ಹರಿಯತೊಡಗಿ ಗಿಡ ಮರ, ಕಟ್ಟಡ, ಇಲೆಕ್ಟ್ರಿಕ್ ಕಂಬ ಹೀಗೆ ದಾರಿಯಲ್ಲಿದ್ದ ಎಲ್ಲವನ್ನೂ ಮೃದುವಾದ ಮಣ್ಣಿನಲ್ಲಿ ಹುಗಿಯಿತು. ಒಂದು ಅಂದಾಜಿನ ಪ್ರಕಾರ ಈ ಕೆಸರನ್ನು ಒಂದು ಚದುರ ಮೈಲಿನಷ್ಟು ಸ್ಥಳದಲ್ಲಿ ಶೇಖರಿಸಿದರೆ ಅದು ನಾಲವತ್ತು ಅಡಿಗಳಷ್ಟು ಎತ್ತರದ ಸ್ಮಾರಕವಾಗುತ್ತಿತ್ತು. ನಿಜ, ಆದರೆ ಹಾಗಾಗಲಿಲ್ಲ, ಪ್ರವಾಹದಲ್ಲಿ ಕೋಟ್ಯಂತರ ಬೆಲೆಯ ಆಸ್ತಿಪಾಸ್ತಿಗಳು ಹೇಳ ಹೆಸರಿಲ್ಲದಂತಾಗುವುದಲ್ಲದೆ ಸಾವಿರಾರು ವನ್ಯಜೀವಿಗಳು ಕೆಸರಲ್ಲಿ ಹೂತುಹೋದವು.

ಅಂತೂ ಕೊನೆಗೊಮ್ಮೆ ಜ್ವಾಲಾಮುಖಿಯ ಅರ್ಭಟ ನಿಂತಿತು. ಆದರೆ ಅದು ಈ ಅವಧಿಯಲ್ಲಿ ಉಂಟುಮಾಡಿದ ಅನಾಹುತ ಬಲು ಭೀಕರವಾಗಿತ್ತು. ತಂದೆ ತಾಯಿಗಳನ್ನು ಕಳೆದುಕೊಂಡ ಹಸುಗೂಸುಗಳೆಷ್ಟೋ ಬಂಧು ಭಗಿನಿಯರನ್ನು



ರಾಬರ್ಟ್ ಲ್ಯಾಂಡ್ಸ್‌ಬರ್ಗ್ ಸಾಯುವ ಮುನ್ನ ಸೆರೆಹಿಡಿದ ಅಗ್ನಿಪಾತದ ಕೊನೆಯ ಚಿತ್ರ

## ಕೋಟಿ ವರ್ಷಗಳ ಹಿಂದೆ

ಭೂಮಿ ಹುಟ್ಟಿದಾಗಿನಿಂದ ಅನೇಕ ಬಾರಿ ಇಂಥ ಅನೇಕ ಜ್ವಾಲಾಮುಖಿಗಳು ಬೆಂಕಿಯುಗುಳಿವೆ, ಬೂದಿ ಸುರಿಸಿವೆ ಮತ್ತು ಕಾಡುಗಳನ್ನು ನಾಡುಗಳನ್ನು, ಅಪರೂಪದ ಪ್ರಾಣಿಸಂಕುಲವನ್ನು ಭೂ-ಉದರದಲ್ಲಿ ಮುಚ್ಚಿಬಿಟ್ಟಿವೆ. ಉತ್ಖನನ ನಡೆಸಿದಾಗ ಇಂಥ ರಹಸ್ಯಗಳು ಬಯಲಾಗಿ ನಮ್ಮ ಇತಿಹಾಸವನ್ನು ಬಿಚ್ಚಿ ತೋರಿಸಿವೆ, ಅಚ್ಚರಿಗೆ ಕಾರಣವಾಗಿವೆ. ಈ ರಹಸ್ಯಗಳು ಬಯಲಾದುತೆಲ್ಲ ಈ ವಿಶ್ವ ಮತ್ತಷ್ಟು ರಹಸ್ಯಮಯವಾಗುತ್ತಲೇ ನಡೆದಿದೆ. ಇಂಥ ಉತ್ಖನನಗಳಿಂದ ನಮ್ಮ ಪ್ರಾಚೀನ ಬೃಹದಾಕಾರದ ಪ್ರಾಣಿಗಳ ಅಸ್ಥಿಪಂಜರಗಳು ದೊರೆತು ಪ್ರಾಣಿಶಾಸ್ತ್ರದಲ್ಲಿ ಅನೇಕ ಶೋಧನೆಗೆ ಕಾರಣವಾಗಿವೆ. ಇಂಥದೊಂದು ಅತಿ ಪ್ರಾಚೀನ ಜ್ವಾಲಾಮುಖಿಯ ಉದಾಹರಣೆ ಇಲ್ಲಿದೆ.

ಅಮೇರಿಕ ಸಂಸ್ಥಾನಗಳ ಪಶ್ಚಿಮ ಪ್ರದೇಶದಲ್ಲಿ ಸುಮಾರು ೧ ಕೋಟಿ ವರ್ಷಗಳ ಹಿಂದೆ ಜ್ವಾಲಾಮುಖಿಯೊಂದು ರುದ್ರತಾಂಡವನಾಡಿತು. ಯಾಕಿಮಾವನ್ನು ಅದರೊಂದಿಗೆ ಹೋಲಿಸಿದರೆ ಇದೇನೂ ಅಷ್ಟು ಭೀಕರವಲ್ಲ. ಗ್ರೇಟ್ ಪ್ಲೇನ್ಸ್ ಎಂದು ಕರೆಯಲ್ಪಡುವ ಪ್ರದೇಶದಿಂದ ಪ್ರಾರಂಭವಾಗಿ ಈಶಾನ್ಯ ಅಮೇರಿಕದ ನೆಬ್ರಾಸ್ಕಾವರೆಗಿನ ಸಾವಿರಾರು ಚದರ ಮೈಲು ಪ್ರದೇಶಕ್ಕೆಲ್ಲ ಬೂದಿಯ ಮಳೆ ಸುರಿಸಿತೆಂದರೆ ಅದರ ಭೀಕರತೆಯ ಅರಿವು ನಮಗಾದೀತು.

ಈ ಭಸ್ಮೀಭೂತ ಪ್ರದೇಶದಲ್ಲಿ ಅನೇಕ ಭೂಗರ್ಭಶಾಸ್ತ್ರಜ್ಞರು, ಪ್ರಾಣಿಶಾಸ್ತ್ರಜ್ಞರು ವರ್ಷಾನುಗಟ್ಟಲೆ ನಡೆಸಿದ ಸಂಶೋಧನೆಗಳು, ಅಗೆತಗಳು ಆ ಎರಡೂ ಇಲಾಖೆಗಳಿಗೆ ಅಪರಿಮಿತ ಮಾಹಿತಿ ಹಾಗೂ ಸಂಗ್ರಹಯೋಗ್ಯ ಅಸ್ಥಿಪಂಜರಗಳನ್ನು ನೀಡಿದುವು. ರ್ಹಿನೋಗಳು, ಮೂರು ಗೊರಸಿನ ಕುದುರೆಗಳು, ಬೃಹದಾಕಾರದ ಒಂಟೆಗಳು, ಕೋರೆಯಿದ್ದ ಜಿಗರೆ ಜಾತಿಯ ಪ್ರಾಣಿಗಳು ಮುಂತಾಗಿ ಲಕ್ಷಾಂತರ ಚಿಕ್ಕ, ದೊಡ್ಡ, ಅತಿ ದೊಡ್ಡ ಪ್ರಾಣಿಸಂಕುಲಗಳು ಇದರಲ್ಲಿ ಹೇಳ ಹೆಸರಿಲ್ಲದಾದುವೆಂದು ಈ ಅಗೆತಗಳಿಂದ ತಿಳಿದುಬಂತು.

ನೆಬ್ರಾಸ್ಕಾ ವಿಶ್ವವಿದ್ಯಾಲಯದ ಒಂದು ಉತ್ಖನನ ತಂಡ ಈ ಪ್ರದೇಶದಲ್ಲಿ ನಡೆಸಿದ ಹಗಲಿರುಳಿನ ಕೆಲಸದ ಫಲಶ್ರುತಿಯೆ ಇದು. ಪ್ರಕೃತಿ ಪ್ರಕೋಪದಿಂದ ಎಂಥೆಂಥ ಅನಾಹುತ!

ವಿಸ್ತಾರಕ್ಕೆ [illegible]. ಈ ವೈಚಿತ್ರ್ಯದ ರಹಸ್ಯ [illegible] [illegible] ಗಳಿಂದ ಗಂಧಕ ಹೊರಸೂಸಿ ಅದರ [illegible] ಮಾನವನಿಗೆ [illegible] ಇನ್ನು.

(ಆಧಾರ: ನ್ಯಾಶನಲ್ ಜಿಯಾಗ್ರಫಿಕ್)



ಸಾವಿರಾರು ಕುಟುಂಬಗಳು, ಚಿರಕಾಲದಿಂದ
ಬಳಕೆಯಲ್ಲಿರುವ ಲವಂಗದೆಣ್ಣೆಯ
ಗುಣಗಳನ್ನು ಪ್ರಾಮಿಸ್‌ನಲ್ಲಿ ಕಾಣುತ್ತವೆ.



# ಲವಂಗದ ಎಣ್ಣೆಯುಳ್ಳ ಅಪೂರ್ವ ಟೂಥ್‌ಪೇಸ್ಟ್ ಪ್ರಾಮಿಸ್

ನೀವೂ ಇದನ್ನು ಉಪಯೋಗಿಸಬಹುದಲ್ಲ!




## ಪ್ರಾಮಿಸ್

ದಂತಕ್ಷಯವನ್ನು ತಡೆಗಟ್ಟಲು ನೆರವಾಗುತ್ತದೆ,
ಶ್ವಾಸದ ದುರ್ಗಂಧವನ್ನು ನಿವಾರಿಸಿ
ಬಾಯಿಯನ್ನು ಸ್ವಚ್ಛಗೊಳಿಸುತ್ತದೆ




3 ಬಲ್ಸಾರಾ ತಯಾರಿಕೆ

ಅಧಿಕ ಆರೋಗ್ಯವುಳ್ಳ ಹಲ್ಲು ಮತ್ತು ಒಸಡುಗಳು,
ಆಹ್ಲಾದಕರ ಶ್ವಾಸ—
ಅದಕ್ಕಾಗಿ ಪ್ರಾಮಿಸ್

CHAITRA-BLS-453 KAN

ಖಾಲಿ ಟ್ಯೂಬ್‌ಗಳ ಬೇಡಿಕೆಯನ್ನು ೩೧ ನೇ ಡಿಸೆಂಬರ್ ೧೯೮೧ ರ ವರೆಗೆ
ವಿಸ್ತರಿಸಲಾಗಿದೆ. ಹೆಚ್ಚಿನ ವಿವರಣೆಗೆ ನಿಮ್ಮ ಮಾರಾಟಗಾರರಲ್ಲಿ ಕೇಳಿರಿ.

ಅಕ್ಟೋಬರ ೧೯೮೧



# ಪರ್ಪಂಚ್ ಇರೋತನಕ ಮುಂದೆ ಕನ್ನಡ ಪದ್ಗೋಳ್ ನುಗ್ಲೀಂದ್ರತ್ನ

**ದೇ. ಜವರೇಗೌಡ**

ಜಿ. ಪಿ. ರಾಜರತ್ನಂ ಅವರೊಡನೆ ನನ್ನ ಪರಿಚಯವಾದದ್ದು ಸುಮಾರು ಮೂರು ದಶಕಗಳ ಹಿಂದೆ. ನಾವಿಬ್ಬರೂ ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ. ಅವರ ಕಾವ್ಯಗಳ ಮೂಲಕ ನನಗೆ ಅವರ ಪರಿಚಯವಾದದ್ದು ನಾಲ್ಕೂವರೆ ದಶಕಗಳ ಹಿಂದೆ. ಆಗ ನಾನು ಇಂಟರ್‌ಮೀಡಿಯಟ್ ತರಗತಿಯ ವಿದ್ಯಾರ್ಥಿ. ಆಗ ಕವಿಗಳೇ ವಾಚನದ ಮೂಲಕ ಓದುಗರನ್ನು ಸಂಪಾದಿಸುತ್ತಿದ್ದ, ನವೋದಯ ಸಾಹಿತ್ಯವನ್ನು ಪ್ರಸಾರ ಮಾಡುತ್ತಿದ್ದ, ಕನ್ನಡಾಭಿಮಾನವನ್ನು ಬೆಳೆಸುತ್ತಿದ್ದ ಕಾಲ. ಕುವೆಂಪು, ಬೇಂದ್ರೆ, ರಾಜರತ್ನಂ ಎಂಥ ದೊಡ್ಡ ಸಭಾಂಗಣವಾದರೂ ಶ್ರೋತೃವೃಂದಕ್ಕೆ ಕಿರಿದಾಗುತ್ತಿತ್ತು. ಕೈಲಾಸಂ ನಾಟಕಗಳನ್ನು ಕಲಾತ್ಮಕವಾಗಿ ವಾಚಿಸುವುದರಲ್ಲಿ ಬಿ. ಎಸ್. ರಾಮರಾವ್ ಬಹ ಪ್ರಸಿದ್ಧರು. ಇವರು ವಾಚನಕ್ಕೆ ನಿಂತರೆಂದರೆ ಕಾಲ ಸಹ ಮೈಮರೆತು ಸ್ಥಗಿತಗೊಳ್ಳುತ್ತಿತ್ತು.

ಅದೆಲ್ಲ ಗತಕಾಲದ ವೈಭವ! ಈಗ ಅದೇ ರೀತಿ ವಾಚಿಸುವವರಿಲ್ಲ. ಕೇಳುವವರಂತೂ ಇಲ್ಲವೇ ಇಲ್ಲ. ಈಗ ವಾಚನ ಕಾರ್ಯಕ್ರಮ ಏರ್ಪಡಿಸಿದರೆ ಅತ್ಯಂತ ಚಿಕ್ಕದಾದ ಸಭಾಂಗಣವೂ ಬರಿದು. ಇದು ಯುಗಧರ್ಮ!

ಖಾದಿಯ ಪಂಚೆ ಜುಬ್ಬಗಳನ್ನು ಧರಿಸಿ, ಭುಜದ ಮೇಲೊಂದು ಕಿರು ಧೋತ್ರವನ್ನು ತೂಗುಹಾಕಿ ವೇದಿಕೆಯನ್ನೇರುತ್ತಿದ್ದ ತುಂಡುಗೂದಲಿನ ರಾಜರತ್ನಂ ಗರಡಿಯ ಮಲ್ಲರಂತೆಯೊ ಭೀಮನಂತೆಯೋ ಕಾಣುತ್ತಿದ್ದರು. ಅವರ ಕಣ್ಣುಗಳಲ್ಲಿ ತಪಃಕಾಂತಿ, ಮುಖದಲ್ಲಿ ಬೌದ್ಧಿಕ ಪ್ರಭೆ ಮುಕ್ಕಳಿಸುತ್ತಿದ್ದುವೇ ಹೊರತು ಬಡತನವ. ಅಥವಾ ನಿರುದ್ಯೋಗದ ಸಮಸ್ಯೆಯ ಚಿಂತೆ ಅವರ ದೇಹದ ಯಾವ ಭಾಗದಲ್ಲಿಯೂ ಮುದ್ರೆಗೊಂಡಂತೆ ಕಾಣುತ್ತಿರಲಿಲ್ಲ.

ಬ್ರಮ್ಮ! ನಿಂಗೆ ಜೋಡಿಸ್ತೀನಿ.
ಯೆಂಡ ಮುಟ್ಟಿದ ಕೈನ!
ಯೆಂಡ ವೋಗ್ಲಿ! ಯೆಡ್ತಿ ವೋಗ್ಲಿ
ಎಲ್ಲಾ ಕೊಚ್ಕೊಂಡ್ ವೋಗ್ಲಿ!
ಪರ್ಪಂಚ್ ಇರೋತನಕ ಮುಂದೆ
ಕನ್ನಡ ಪದಗೊಳ್ ನುಗ್ಲಿ.

ಒಂದೇ ಕೇರೀಲ್ ಉಟ್ ಬೆಳದೋರು
ಒಂದೇ ಬೀದೀಲ್ ಒತ್ ಕಳದೋರು
ನಾವ್ಗೊಳ್ ಆಡಿ ಮಾಡಿದ್ದೆಲ್ಲಾ
ನಿಂಗೆ ನೆಪ್ಪೈತ ನಂಜಿ ?

ಎಂಬ ಪದಗಳು ಅಪೂರ್ವವಾದ ಗತ್ತಿನಿಂದ, ರಾಜರತ್ನಂ ಅವರಿಗೆ ಮಾತ್ರ ಮೀಸಲಾದ ಅನನುಕರಣೀಯವಾದ ಶೈಲಿಯಲ್ಲಿ ಅವರ ಕಂಚಿನ ಕಂಠದಿಂದ ಮಿಂಚಿದಾಗ, ಇಡೀ ಸಭೆಯ ಮನಸ್ಸುಗಳಲ್ಲಿ ಕಚಗುಳಿಯಿಟ್ಟಂತಾಗಿ ಆಕಾಶವೇ ಅಬ್ಬರಿಸಿದಂತೆ, ಪರಮೇಶ್ವರನೆ ನಕ್ಕಂತೆ ನಗೆ ತಾಂಡವವಾಡುತ್ತಿತ್ತು. ನಿಮಿಷಗಟ್ಟಳೆ ಪ್ರವಹಿಸುತ್ತಿದ್ದ ನಗೆಯ ಮೊಳಗನ್ನು ಸ್ಥಗಿತಗೊಳಿಸಬೇಕಾದರೂ ಅವರೇ ಕಣ್ಣರಳಿಸಿ, ಕೈಸನ್ನೆ ಮಾಡಿ, 'ಸಾಕು ಸಾಕು,' ಎಂದು ಗುಂಡಿಟ್ಟ ಹಾಗೆ ಸಿಡಿಯಬೇಕಾಗುತ್ತಿತ್ತು. ಒಂದು ಪಂಕ್ತಿ ಮುಗಿದು ಮತ್ತೊಂದು ಪಂಕ್ತಿ ಹೊರ ಹೊಮ್ಮಿದಾಗಲೆಲ್ಲ ಸಾಕು ಕೇಕೆ ಚಪ್ಪಾಳೆಗಳು ಧುಮ್ಮಿಕ್ಕುತ್ತಿದ್ದುವು. ಜಡವಸ್ತುಗಳಲ್ಲಿಯೂ ಚೈತನ್ಯ ಮೂಡಿದಂತೆ ಭಾಸವಾಗುತ್ತಿತ್ತು.

ಮಸೆ, ಮಸೆ, ಕೊಡಲಿ ಮಸೆ.
ಕ್ರಾಂತಿಗೆಂದು. ಗುಡುದೊಟ್ಟು
ಮಸೆ, ಮಸೆ ಕೊಡಲಿ ಮಸೆ
ಮಸೆಯುತೆ ಕ್ರಾಂತಿಯ ಕ್ರೂರ ಕುಠಾರ.

ಈ ಮಾತುಗಳನ್ನವರು ತಡೆ ತಡೆದು ಪಠಿಸುತ್ತಿದ್ದಾಗ ಶ್ರೋತೃಗಳ ಶರೀರದಲ್ಲಿ ನವಪ್ರಾಣಶಕ್ತಿ ಹರಿದಂತಾಗಿ ಅವರ ಮುಖಗಳಲ್ಲಿ ಮಿಂಚು ಹೊಸಲಿಡುತ್ತಿತ್ತು. ಅಂದು ಕೇಳಿದ ಆ ಸಾಲುಗಳು ಅಂದಿನ ಅವರ ಸಿಂಹಕಂಠ ಇಂದಿಗೂ ಚಿತ್ತಕೋಶದಲ್ಲಿ ಘೂರ್ಣಿಸುತ್ತಿವೆ. ರೋಮಾಂಚನವುಂಟು ಮಾಡುತ್ತಿವೆ.

ಒಂದೋ ಒಂದೂವರೆ ವರ್ಷವೊ ಸೆಂಟ್ರಲ್ ಕಾಲೇಜಿನ ಕನ್ನಡ ಇಲಾಖೆಯಲ್ಲಿ ನಾನು ಅವರೊಡನೆ ಕೆಲಸ ಮಾಡಿದ್ದುಂಟು. ಇಲಾಖೆಯೆಂದ ಕೂಡಲೇ ದೊಡ್ಡವರ ಕಲ್ಪನೆ ಮಾಡುವುದು ಸಹಜವಷ್ಟೇ. ಆಗ ಕನ್ನಡ ಇಲಾಖೆಯ ಬಲ ಎರಡೇ ಎರಡು: ಒಂದು ತಲೆ, ಮತ್ತೊಂದು ಬಾಲ. ಇಲಾಖೆಗೆಂದು ಕೊಟ್ಟಿದ್ದ ಕೋಣೆ ಇದ್ದದ್ದಾದರೂ ಎಲ್ಲಿ? ಇಡೀ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಮಾತ್ರವಲ್ಲ, ಅಧ್ಯಾಪಕ ವರ್ಗಕ್ಕೂ ಸೇವೆ ಸಲ್ಲಿಸಬೇಕಾಗಿದ್ದ ಕಕ್ಕಸಿನ ಮಗ್ಗುಲಿಗೆ. ಕೋಣೆಯ ನೆಲಕ್ಕೆ ಹಾಸಿದ್ದುದು ಉಬ್ಬು ತಗ್ಗುಗಳಿದ್ದ ಕಲ್ಲು ಚಪ್ಪಡಿ. ಅದರೊಳಗೆ ಮೂವರು ನಾಲ್ವರು ಇಕ್ಕಿಕೊಂಡು ಕುಳಿತಿರಬಹುದಾದಷ್ಟು ಸ್ಥಳಾವಕಾಶವಿತ್ತು. ಹೆಚ್ಚಿಗೆ ಬಂದ ಜನ ಹೊರಗೆ ನಿಂತುಕೊಂಡೇ ಮಾತು ಮುಗಿಸಿ, ಬಂದ ದಾರಿ ಹಿಡಿಯಬೇಕಾಗುತ್ತಿತ್ತು. ಮೇಷ್ಟರೇ ಯಾವಾಗಲೊ ಒಮ್ಮೆ ಕಸ ತೆಗೆಯಬೇಕಾಗುತ್ತಿತ್ತು. ಕೋಣೆಯ ಹಿಂದೆಯೇ ಕಾಲೇಜಿನ ಹೋಟಲಿತ್ತು. ತಿಂಡಿ ಕರಿಯುತ್ತಿದ್ದ ಅಲ್ಲಿಯ ಕಂಟು ವಾಸನೆಗೂ ಕಕ್ಕಸಿನ ಗಮಲಕ್ಕೂ ಸದಾ ಪೈಪೋಟಿ ನಡೆಯುತ್ತಿತ್ತು. ಹೀಗಾಗಿ ಅಧ್ಯಾಪಕರಿಗೆ ಅಲ್ಲಿ ಹೆಚ್ಚು ಕಾಲ ನಿಂತು, ಮಾತುಕತೆಗಳ ಮೂಲಕ ಗಾಢ ಸಂಪರ್ಕ ಬೆಳೆಸಿಕೊಳ್ಳುವ ಅವಕಾಶವಿರಲಿಲ್ಲ.

ಜತೆಗೆ ಇಬ್ಬರು ಕನ್ನಡ ಅಧ್ಯಾಪಕರಿಗೆ ಕಾಲೇಜಿನಲ್ಲಿ ಸಾಕಷ್ಟು ಕೆಲಸವಿರಲಿಲ್ಲ. ಆದ್ದರಿಂದ

ಅವರು ಮಹಾರಾಣಿ ಕಾಲೇಜ್ ಇಂಟರ್‌ಮೀಡಿಯೆಟ್ ಕಾಲೇಜುಗಳ ನಡುವೆ ಓಡಾಡುತ್ತ ಪಾಠ ಹೇಳುತ್ತ, ತಾವು ಬಿಟ್ಟಿಯಾಗಿ ಸಂಬಳ ತೆಗೆದುಕೊಳ್ಳುತ್ತಿಲ್ಲವೆಂಬುದನ್ನು ಸಮರ್ಥಿಸಿಕೊಳ್ಳಬೇಕಾಗಿತ್ತು.

ಹೀಗಾಗಿ ನಾವು ವಾರಕ್ಕೊಮ್ಮೆಯೋ, ಮೂರುಮೆಯೋ ಮಾತ್ರ ಇಲಾಖೆಯಲ್ಲಿ ಸೇರುತ್ತಿದ್ದೆವು. ಅದೂ ಕೆಲವು ನಿಮಿಷಗಳು ಮಾತ್ರ. ಏಕೆಂದರೆ ನಾವು ಬರುತ್ತಿದ್ದಂತೇ ಪಾಠದ ಗಂಟೆ ಶುರುವಾಗುವುದಕ್ಕೆ ಐದು ಹತ್ತು ನಿಮಿಷಗಳಿವೆ–ಯನ್ನುವಾಗ ಆ ಬಿಡುವಿನಲ್ಲೊಮ್ಮೆ ಮಸಾಲೆ ದೋಸೆಯ ವಾಸನೆ ನಮ್ಮನ್ನು ಹೋಟಲಿನಲ್ಲಿ ಸೆರೆಗೆಯ್ಯುತ್ತಿತ್ತು. ಕನ್ನಡ, ಪುಟ್ಟಾಜಿ ಮತ್ತು ಯೆಂಡಗಳಲ್ಲಿದ್ದಷ್ಟೇ ಒಂದು ಕೈ ಅವುಗಳಿಕಿಂತ ಮಿಗಿಲಾದ ಪ್ರೀತಿ. ಅವರಿಗೆ ಮಸಾಲೆ ದೋಸೆಯಲ್ಲಿರುತ್ತಿತ್ತು. ಅವರಿಗೆ ಮಾತ್ರ ಏಕೆ? ಗನ್ನಡ ಅಧ್ಯಾಪಕರಲ್ಲನೇಕರು ಲಕ್ಷ್ಮಿಯನ್ನು ಒಲಿಸಿಕೊಂಡು ಹುಟ್ಟದಿದ್ದರೂ, ತಿಂಡಿ ತೀರ್ಥಗಳಲ್ಲಿ ದೋಸೆಯಂಥ ತಿನಿಸಿನಲ್ಲಿ ರಸಿಕತೆಯ ವರವನ್ನು ಪಡೆದುಕೊಂಡು ಬಂದವರು. ಇದಕ್ಕೆ ಪಿಸೀಯವರ 'ದೋಸೆ'ಯೂ ಸಾಕ್ಷಿ. ಪ್ರಸಿದ್ಧವಾದ ಹೋಟಲುಗಳಿಗೆ ಹೋದಾಗ ರಾಜರತ್ನಂ ಆಗಲಿ, ದೋಲನ (ಡಿ. ಎಲ್. ನರಸಿಂಹಾಚಾರ್) ಅವರಾಗಲೀ ಬಾಜಿ ಕಟ್ಟಿಕೊಂಡು ಮೂರರತನಕ ಮಸಾಲೆ ದೋಸೆ ತಿಂದದ್ದುಂಟು ದೋಸೆಯ ರುಚಿ ರಕ್ತಕ್ಕಿಳಿದಿದ್ದರಿಂದಲೇ ಅವರು ಉದ್ದಾಮ ಪಂಡಿತರಾದದ್ದೆಂದು ತೋರುತ್ತದೆ!

ತೀನಂಶ್ರೀ ಅವರಂತೆಯೇ ರಾಜರತ್ನಂ ಅವರು ಸಹಜ ವಾಗ್ಮಿಗಳು, ಶ್ರೇಷ್ಠ ಬೋಧಕರು. ಅವರ ನಿಂತ ನಿಲವಿಗೆ, ಕಂಚಿನ ಕಂಠಕ್ಕೆ, ಸ್ಪಷ್ಟೋಚ್ಚಾರಣೆ, ವಿಷಯ ಪ್ರತಿಪಾದನೆಗೆ ಭಾವಾಲೋಚನೋಚಿತವಾದ ವಿರಳಿತಗಳ ಹಾಗೂ ಗತ್ತು ಲಯಗಳ ಮಾಧುರ್ಯಕ್ಕೆ ಬೆರಗಾಗದವರಿಲ್ಲ. ಬೃಹತ್ ಸಭೆಯಲ್ಲಿಯೂ ಅವರಿಗೆ ಮೈಕು ಬೇಡ. ಎಂಥ ಗಲಾಟೆ ಇಸಮುಗಳೂ ಗಾರುಡಿಗನ ಸರ್ಪದಂತೆ ಮುದುರಿಕೊಳ್ಳುತ್ತಿದ್ದರು. ಅವಶ್ಯವೆನಿಸಿದ್ದರೆ ತರಗತಿಯಲ್ಲಿ ಬಯ್ಯಲೂ ತೋಳೇರಿಸಲೂ ಅವರು ಸಿದ್ಧ. ವಿದ್ಯಾರ್ಥಿಗಳ ತುಂಟತನ ಅಂಥವರನ್ನೂ ಕೆರಳಿಸದಿರಲಿಲ್ಲ. ಒಂದು ಪಾಠ ಶುರುವಾಗುತ್ತಿದ್ದಂತೆಯೇ ಒಬ್ಬಿಬ್ಬರು ಹಿಂದಿನ ಬೆಂಚಿನ ತುಂಟರು ಕೇಕೆ ಹಾಕಿದರು. "ಯಾರದು? ಗಂಡಸ್ಸಾದವನಾದರೆ ಎದ್ದು ನಿಲ್ಲಿ" ಎಂದರು, ಅಧ್ಯಾಪಕರು. ಯಾರೂ ಮೇಲೇಳಲಿಲ್ಲ. ಇಡೀ ತರಗತಿಯನ್ನು ಕೋಲಾಹಲ ವ್ಯಾಪಿಸಿತು. ಸರಿ, ಅಧ್ಯಾಪಕರು ಗಾಂಧಿ ಬಾಣವನ್ನು ಪ್ರಯೋಗಿಸಿದರು. ಪಾಠವನ್ನು ನಿಲ್ಲಿಸಿ ಕುರ್ಚಿಯಲ್ಲಿ ಕುಳಿತು, ಗಂಟೆ ಪೂರೈಸುವತನಕ ಮೌನ ತಾಳಿದರು. ತರಗತಿಯಲ್ಲಿ ಸ್ಮಶಾನ ಮೌನ; ಶ್ವಾಸಕ್ರಿಯೆ ಸಹ ನಿಂತಂತೆ ಭಾಸವಾಗುತ್ತಿತ್ತು. 'ಮುಂದಿನ ವಾರವೂ ಇದೇ ಪಾಠ' ಎಂದು ನುಡಿದು ರಾಜರತ್ನಂ ಕೋಣೆಗೆ ಬಂದರು. ಒಂದು ದಿನದ ಪಾಠ ಹೋಯಿತೆಂಬ ದುಗುಡ ಅವರ ಮುಖದ ಮೇಲೆ ಅಚ್ಚೊತ್ತಿದಂತಿತ್ತು. ತುಸು ಹೊತ್ತು ಅವರ ಮುಖವನ್ನೇ ನೋಡುತ್ತ ಕುಳಿತೆ. ಕೊನೆಗೆ ಅವರೇ ಮೌನವನ್ನು ಮುರಿದು ಪ್ರಕರಣವನ್ನು ವಿವರಿಸಿದರು. ಅಷ್ಟರಲ್ಲಿ ಕೆಲವು ವಿದ್ಯಾರ್ಥಿಗಳು ಬಂದು 'ಇಂದು ನಡೆದದ್ದಕ್ಕೆ ವಿಷಾದ ವ್ಯಕ್ತಪಡಿಸುತ್ತೇವೆ. ದಯವಿಟ್ಟು ಕ್ಷಮಿಸಿ, ಮುಂದೆಂದೂ ಹೀಗೆ ವರ್ತಿಸುವುದಿಲ್ಲ. ಯಾರಾದರೂ ಹಾಗೆ ವರ್ತಿಸಿದ್ದಾದರೆ ನಾವೇ ಹೊಣೆ ನಿಲ್ಲುತ್ತೇವೆ. ಅವಶ್ಯವೆನಿಸಿದರೆ ಮುಚ್ಚಳಿಕೆ ಬರೆದು ಕೊಡುತ್ತೇವೆ' ಎಂದರು. ರಾಜರತ್ನಂ ಬುಸುಗುಟ್ಟಿದರು, ಮಾತಿನಲ್ಲಿ ಛೀಮಾರಿಸಿದರು, ಶಾಮಾರಿದ ನಂತರ ನಕ್ಕರು. ಬಂದ ವಿದ್ಯಾರ್ಥಿಗಳಿಗೆ ಕಾಫಿ ಕೊಡಿಸಿದರು, ಸೂಕ್ತ ಬುದ್ಧಿವಾದ ಹೇಳಿ ಕಳಿಸಿದರು. ಪ್ರಾಯಶಃ ಅಂಥ ಪ್ರಸಂಗ ಮುಂದೆಂದೂ ಅವರ ಜೀವನದಲ್ಲಿ ನಡೆದಿರಲಾರದು. ಏಕೆಂದರೆ, ರಾಜರತ್ನಂ ಅವರ ಹೆಸರೇ ವಿದ್ಯಾರ್ಥಿಗಳಿಗೆ ಗಾರುಡಮಂತ್ರವಾಗಿತ್ತು.

ಶ್ರೀಯವರ ಕನ್ನಡ ಶ್ರದ್ಧೆ ಆಗಿನ ಕಾಲದಲ್ಲಿ ಒಂದು ಸಾಂಕ್ರಾಮಿಕ ಗುಣವಾಗಿ ಪರಿಣಮಿಸಿತ್ತಷ್ಟೆ. ಆ ಶ್ರದ್ಧೆಯನ್ನು ಕುರಿತು ಅವರು ಹಿಂದೆ ನಡೆದೊಂದು ಕತೆಯನ್ನು ಆಗಾಗ್ಗೆ ವಿವರಿಸುತ್ತಿದ್ದರು. ಒಮ್ಮೆ ಚಿಕ್ಕಬಳ್ಳಾಪುರದಲಿ ಪ್ರಚಾರೋಪನ್ಯಾಸ ಕಾರ್ಯಕ್ರಮ ...

## ಸಂವೇದನೆ !

ನನ್ನ ಎದೆ
ಕಾಯ್ದ 'ತವೆ'ಯಂತಾಗಿದೆ
ಹನೀ
ಅವರ ಮೇಲೆ ಬಿದ್ದ
ನೀ ಸುರಿಸುವ ಕಣ್ಣೀರು
'ಚುರುಕ್' ಎಂದು
ಆವಿಯಾಗುತ್ತೇ
ವಿನಾ
ನನ್ನ ಎದೆ
ತಣ್ಣಗಾಗುವುದಿಲ್ಲ.

—ಸಿದ್ಧರಾಜ ಪೂಜಾರಿ

ಮಾಸ್ತಿ, ಟಿ. ಎಂ. ಶ್ರೀ ರಾಜರತ್ನಂ, ಟಿ. ಶ್ರೀನಿವಾಸರಾವ್ ಮೊದಲಾದವರು ಉಪನ್ಯಾಸ ಗೊತ್ತಾಗಿದ್ದ ಸ್ಥಳಕ್ಕೆ ಸಕಾಲದಲ್ಲಿ ಹೋದರು. ಅಲ್ಲಿ ನರಪಿಳ್ಳೆಯೊಂದೂ ಇರಲಿಲ್ಲ. ಆವರಿಂವ ಶ್ರೀ ಅವರು ವಿಚಲಿತರಾಗಲಿಲ್ಲ. ತಮ್ಮ ಶಿಷ್ಯರೊಬ್ಬರು ಸಬ್ ಡಿವಿಜನ್ ಅಧಿಕಾರಿಗಳಾಗಿದ್ದರು. ಮಿತ್ರ ಸಮೇತರಾಗಿ ಅವರ ಕಚೇರಿಗೆ ನಡೆದರು. ಗುರುವಿನಾಗಮನದಿಂದ ಶಿಷ್ಯ ಚಕಿತನಾದ; ಕೂಡಲೇ ಕಚೇರಿಗೆ ಬೀಗ ಮುದ್ರೆ ಹಾಕಿದ. ಅಂಗಡಿ ಬೀದಿಯಲ್ಲಿ ಅವರನ್ನು ಕರೆದುಕೊಂಡು ಹೊರಟ; ಹೋಗುವಾಗ ಅಂಗಡಿಗಳನ್ನು ಮುಚ್ಚಿಸಿ, ಶ್ರೋತೃಗಳನ್ನು ಕಲೆಹಾಕಿಕೊಂಡು ಹೋದ. ಕನ್ನಡದ ಪ್ರಸಾರ ಆಗಿನ ಕಾಲದಲ್ಲಿ ಎಷ್ಟು ವಿಘ್ನಗಳಿಂದ ಕೂಡಿತ್ತೆನ್ನು-ವುದಕ್ಕೆ ಈ ಪ್ರಸಂಗವನ್ನು ರತ್ನಂ ಉದಾಹರಿಸುತ್ತಿದ್ದರು.



ರಾಜರತ್ನಂ ಎಂದೂ ಅಧಿಕಾರಕ್ಕಾಗಿ ಆಸೆ-ಪಟ್ಟವರಲ್ಲ. ಬರಲಿಲ್ಲವೆಂದು ಗೋಳಾಡಿದವರಲ್ಲ; ಹಾರಾಡಿದವರಲ್ಲ. ಕನ್ನಡದ ಕೆಲಸವೇ ಅವರ ಸರ್ವಸ್ವವಾಗಿದ್ದುದರಿಂದ, ಅದರಲ್ಲಿ ತೃಪ್ತಿ [illegible] ಅಷ್ಟೋ ಇಷ್ಟೋ

ಸ್ಥಿರ ಸಂಪಾದನೆಗಾಗಿ ಕೇವಲ ಹೊಟ್ಟೆಪಾಡಿಗಾಗಿ ಎಂಥದ್ದಾದರೂ ಒಂದು ನೌಕರಿ ಸಾಕೆಂದು ತಿಳಿದವರು. ನೌಕರಿ ಸಿಕ್ಕಿದ ಮೇಲೆ ಬಡ್ತಿಯ ಕಡೆಗೆ ಅವರೆಂದೂ ಆಲೋಚನೆ ಹರಿಸಿದವರಲ್ಲ. ಅವರಲ್ಲಿದ್ದ ಶೋಕಿಗಳು ಮೂರೇ ಮೂರು; ಹೆಚ್ಚೆಂದರೆ ನಾಲ್ಕು. ಹಳೆ ಪುಸ್ತಕ ದಂಗಡಿಗಳಲ್ಲಿ ಪುಸ್ತಕ ಕೊಳ್ಳುವುದು ಅವರ ಮೊದಲನೇಯ ಶೋಕಿ. ಸಂಜೆಯ ವೇಳೆಯಲ್ಲಿ ಅವರನ್ನು ಅಂಥ ಅಂಗಡಿಗಳ ಮುಂದೆ ಕಾಣಬಹುದಿತ್ತು. ಓದು ಬರಹ ಎರಡು ಮೂರನೆಯ ಶೋಕಿಗಳು. ನಾಲ್ಕನೆಯದೆಂದರೆ ಮಸಾಲೆ ದೋಸೆ. ನಾಗರಿಕ ಮಾನವನನ್ನು ಸೆರೆಹಿಡಿದಿರುವ ಖರ್ಚು ಬಾಬ್ತಿನ ಅನೇಕ ಶೋಕಿಗಳಿಂದ ಅವರು ಬಲು ದೂರ. ಬಟ್ಟೆಯೋ? ಹಿಂದೆ ಹೇಳಿದೆಯಲ್ಲ. ತರಗತಿಗೆ ಹೋಗುವಾಗ ಮಾತ್ರ, ಲುಂಗಿಯೇ ಕಚ್ಚೆಯಾಗುತ್ತಿತ್ತು. ಉಳಿದದ್ದೆಲ್ಲ ಮಾಮೂಲಿ. ಇಲಾಖೆಯ ಕೋಣೆಯಲ್ಲಿ ಒಂದು ಮಡಿ ಪಂಚೆಯನ್ನಿಟ್ಟಿರುತ್ತಿದ್ದರು. ಅದೂ ಖಾದಿಯದೇ. ಅದು ಕಚ್ಚೆಗೆಂದೇ ಅಂಕಿತವಾಗಿತ್ತು. ತರಗತಿಯಿಂದ ಹಿಂದಿರುಗಿದ ಕೂಡಲೇ ಅದು ಸ್ವಸ್ಥಾನ ಸೇರುತ್ತಿತ್ತು. ಕೊಳೆಯಾದಾಗ ಮಾತ್ರ ಮನೆ ಸೇರುತ್ತಿತ್ತು.

ಕನ್ನಡದ ಜನ ತುಂಬ ವಿವೇಕಿಗಳು, ಆತ್ಮ-ಗೌರವವುಳ್ಳವರು, ಧನವ್ಯಯದಲ್ಲಿ ಮಿತವುಳ್ಳವರು. ಬೇರೆಯವರು ಬರೆದ ಪುಸ್ತಕಗಳ-ನ್ನೋದಬೇಕಾದ ಅಗತ್ಯ ಅವರಿಗಿಲ್ಲ. ವೇಷ ಭೂಷಣ, ಮದುವೆ ಮುಂಜಿ, ಯಾತ್ರೆ ಜಾತ್ರೆ, ಮನೆ ಮಠ, ಭೋಜನ ಪಾನೀಯ, ದಂಡ ದಕ್ಷಿಣೆ, ಲಂಚ ರುಷುವತ್ತು ಇವೇ ಮೊದಲಾದ ಅತ್ಯಗತ್ಯವೂ ಮೋಕ್ಷದಾಯಕವೂ ಆದ ಹವ್ಯಾಸಗಳಿಗೆ ಅವರು ಶಕ್ತಿ ಮೀರಿ, ಸಾಲ ಮಾಡಿಯಾದರೂ ಖರ್ಚು ಮಾಡುತ್ತಾರೆಯೇ ಹೊರತು ಪುಸ್ತಕ ಸಂಗ್ರಹದಂಥ ದುಷ್ಕಾರ್ಯಗಳಿಗೆ ಮುರಿತೂ ಹಣ ವ್ಯಯಿಸುವುದಿಲ್ಲ. ಹೀಗಿರುವಾಗ ಲೇಖಕರೋ ಅವರ ಮನೆಯವರೋ ಅಥವಾ ಅವರಂಥ ಕೆಲವು ಹುಚ್ಚರೋ ಗ್ರಂಥಗಳನ್ನು ಕೊಳ್ಳಬೇಕಾಗುತ್ತದೆ. ರಾಜರತ್ನಂ [illegible]

ಬಾಗಿ ಬರೆದವರು ತಿನ್ನ ಪುಸ್ತಕಗಳನ್ನು ಪ್ರಕಟಿಸುವವರಾದರೂ ಯಾರು? ಅದರಲ್ಲಿಯೂ ಅವರ ಪರತ್ತುಗಳಿಗೆ ತಕ್ಕಂತೆ. ಆದ್ದರಿಂದ ಅವರೇ ಗಳಗನಾಥರಂತೆ ತಮ್ಮ ಗ್ರಂಥಗಳನ್ನು ಮೂಟೆ ಕಟ್ಟಿಕೊಂಡು ಹೋಗಿ ಮಾರಾಟ ನಡೆಸಿದ್ದುಂಟು. ಯಾರಾದರೂ ಉಪನ್ಯಾಸಕ್ಕೆ ಆಹ್ವಾನಿಸಿದ್ದಾದರೆ ಅವರು ತಮ್ಮ ಗ್ರಂಥಗಳ ಒಂದು ಕವಳಿಗೆ ಯನ್ನಾದರೂ ಕೊಳ್ಳಬೇಕೆಂದು ಷರತ್ತು ಹಾಕುತ್ತಿದ್ದರು. ಅವರಿಗೆ ಊಟ ಬೇಡ, ತಿಂಡಿ ಬೇಡ, ಹೂವಿನ ಹಾರ ಬೇಡ. ಇಷ್ಟು ಮಾಡುವುದು ಕಷ್ಟವೆ ಕರೆದವರಿಗೆ? ಅವರ ಈ ಹಂಚಿಕೆಯನ್ನು 'ಅನಗತ್ಯ ಉಪದ್ವ್ಯಾಪವೆಂದು ಹಂಗಿಸಿದ ಮಹನೀಯರೂ ಇಲ್ಲದಿಲ್ಲ. ಅಚ್ಚು ಮಾರಾಟಗಳು ಲೇಖಕನ ಕೆಲಸವಲ್ಲ, ನಿಜ. ಆದರೆ ರಾಜರತ್ನಂ ಅವರಂಥ ಶ್ರೇಷ್ಠ ಲೇಖಕರನ್ನು ಅಂಥ ಪರಿಸ್ಥಿತಿಗೆ ನೂಕಿದ ಜನ ಅದರ ತಪ್ಪು ಕಪ್ಪುಗಳಿಗೆ ಹೊಣೆಗಾರರಾಗಬೇಕಾಗುತ್ತದೆ.

ಅವರ ಬದುಕಿನ ಪ್ರಧಾನ ಗುಣಗಳೆಂದರೆ ಸರಳತನ ಹಾಗೂ ಸ್ವಚ್ಛತನ. ಅವರ ಪ್ರತಿಯೊಂದು ವ್ಯವಹಾರದಲ್ಲಿಯೂ ಅವು ಎದ್ದು ಕಾಣುತ್ತಿದ್ದುವು. ಗಾಂಧೀವಾದ ಅವರಿಗೆ ಕೇವಲ ತತ್ತ್ವವಾಗುಳಿದಿರಲಿಲ್ಲ. ಅದು ನಿತ್ಯಾನುಷ್ಠಾನದ ಮಂತ್ರವಾಗಿತ್ತು. ತಾವು ಮಹಾ ಮನೀಷಿಗಳೆಂಬ ಅಹಂಭಾವವಾಗಲೀ, ಶ್ರೇಷ್ಠ ಪ್ರಾಧ್ಯಾಪಕರೆಂಬ ಹೆಬ್ಬುಬ್ಬೆಯಾಗಲೀ ಅವರಲ್ಲಿರಲಿಲ್ಲ. ತನ್ನೊತ್ತಿನ ಅಧ್ಯಾಪಕರ ಬಗ್ಗೆ ಪ್ರೀತಿ ಸಹಾನುಭೂತಿಗಳಿಂದ ವರ್ತಿಸುತ್ತಿದ್ದರು. ಯಾರ ಹಂಗಿಗೂ ಅವರು ಕೈಯೊಡ್ಡಿದವರಲ್ಲ. ಆತ್ಮಪ್ರತ್ಯಯ ಹಾಗೂ ಸ್ವಾಭಿಮಾನಗಳಿಗೆ ಅವರು ತವರು. ಒಂದು ಬಗೆಯ ನಿರ್ಲಿಪ್ತತೆ ಅವರ ಜೀವನಕ್ಕಂಟಿಕೊಂಡು ಬಂದ ಹೆಗ್ಗುಣ. ಇದರಿಂದಾಗಿ ಅವರ ಬದುಕು ಕಲೆಯಾಯಿತು, ಪರಿಮಳವಾಯಿತು. 'ರತ್ನನ ಪದಗಳು' ಕೃತಿಯಲ್ಲಿ ಅವರ ಬದುಕಿನ ಮರ್ಮದೃಷ್ಟಿ ತತ್ತ್ವಗಳು ಪ್ರತಿಬಿಂಬಗೊಂಡಿದೆ.

೨

ರನ್ನನ ಪದಗಳಲ್ಲಿ ರಾಜರತ್ನಂ ಜೀವನಾನುಭವವನ್ನು ಭಟ್ಟಿಯಿಳಿಸಿದ್ದಾರೆ. ಬದುಕೇ ಕಾವ್ಯವಾಗಿ, ಕಾವ್ಯವೇ ಬದುಕಾಯಿತೆಂದರೂ ಸಲ್ಲುತ್ತದೆ. ಈ ಮಾತಿಗೆ 'ರತ್ನನ ಪರ್ಪಂಚ'ವೇ ಸಾಕ್ಷಿ.

ಯೋಳ್ಕೊಳ್ಳಾಕ್ ಒಂದ್ ಊರು
ತಲೆಮ್ಯಾಗ್ ಒಂದ್ ಸೂರು
ಮಲಗಾಕೆ ಬೂಮ್ತಾಯಿ ಮಂಚ;
ಕೈಯಿಡದೋಳ್ ಪುಟ್ನಂಜಿ
ನೆಗನೆಗತ ಉಪ್ಗಂಜಿ
ಕೊಟ್ರಾಯ್ತು ರತ್ನನ್ ಪರ್ಪಂಚ!

ಇದು ವೋಟು ಸಂಪಾದನೆಗಾಗಿ ಹಾಗೂ ಸ್ವಾರ್ಥ ಸಾಧನೆಗಾಗಿ ಗಂಟಲಿರಿದುಕೊಂಡು ಮಾಡುವ ವಂಚನೆಯ ರಾಜಕೀಯ ಭಾಷಣವಲ್ಲ; ಸದಾ ಭೋಗವೈಭವದಲ್ಲಿ ಮುಳುಗಿರುತ್ತ, ಗಾಂಧಿ ಜಯಂತಿಯಂದು ಅಥವಾ, ಅಧಿಕಾರ ಸ್ವೀಕಾರ ಸಂದರ್ಭದಲ್ಲಿ ರಾಜಘಾಟಿಗೆ ಹೋಗಿ, ಗಾಂಧಿ ತತ್ತ್ವವನ್ನನುಸರಿಸುವುದಾಗಿ ಪ್ರತಿಜ್ಞೆ ತೊಟ್ಟು, ಮರುಗಳಿಗೆಯಲ್ಲಿಯೇ ಅದನ್ನು ಮರೆಯುವ ಮಾತಿನ ಮಲ್ಲರ ಉಪನ್ಯಾಸವಲ್ಲ. ರಾಜರತ್ನಂ ಹಗಲೆಲ್ಲ ಬೆವರು ಹರಿಸಿದ್ದುಂಟು. ಪ್ರಪಂಚವನ್ನು ಮರೆತು ಕನ್ನಡದಲ್ಲಿ ಪದ ಕಟ್ಟಿ ಹಾಡಿದ್ದುಂಟು. ತಂಚ ವಂಚ ಅವರಿಗೆ ಗೊತ್ತಿಲ್ಲ. ಅವರು ಬಡತನಕ್ಕೆ ಹೆದರಿದವರಲ್ಲ, ದುರ್ನಡತೆಗೆ ಅಂಜಿದರು. ಕೊಡುವುದು ಬಿಡುವುದು ದೇವರ ಕರ್ಮ. ಅವನು ನಡೆಸಿದಂತೆ ಬಾಳು ನಡೆಸುವುದು ನರರ ಧರ್ಮವೆಂದು ನಂಬಿದವರು ಅವರು. ಕಷ್ಟನಷ್ಟಗಳಲ್ಲಿ ಗೋಳಾಡದೆ, ನೆರೆಹೊರೆಯನ್ನು ನರಕಮಾಡದೆ, ನಗುನಗುತ್ತ, ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿಯುತ್ತ, ಸದಾ ಕರ್ಮನಿರತನಾದದ್ದಾದರೆ ಲೋಕ ಸಹನೀಯವಾಗುತ್ತದೆಂದು, ಅದೇ ಜೀವನಕಲೆಯೆಂದು ತ್ರಿಕರಣ ಶುದ್ಧಿಯಾಗಿ ಆಚರಿಸಿದವರು ಅವರು.

ಸುಖಕ್ಕೆ ಧನಕನಕ ವಸ್ತುವಾಹನಗಳು ಆಧಾರವಲ್ಲ. ಸಂತೃಪ್ತ ಜೀವನಕ್ಕೆ ಬಡತನ ಅಡ್ಡಿಯಾಗುವುದಿಲ್ಲ. ನಿಜಕ್ಕೂ ಹಣವಂತರಿಗಿಂತ ಹಾಗೂ ಓದಿದವರಿಗಿಂತ ಮಿಗಿಲಾಗಿ ನಿರಕ್ಷರ ಕುಕ್ಷಿಗಳಾದ ಗ್ರಾಮೀಣ ಜನ ಸುಖವಾಗಿರು

ತ್ತಾರೆ. ಬಡವರಿಗೆ ಹೊಟ್ಟೆಯ ಚಿಂತೆಯೊಂದಾದರೆ, ಸಿರಿವಂತರಿಗೆ ಹಾಗೂ ನಾಗರಿಕರಿಗೆ ನಾನಾ ಚಿಂತೆ. ಬಡತನ ಧಾಳಿ ನಡೆಸುತ್ತಿದ್ದರೂ, ರತ್ನ-ಮಂಜುವರ ಸಂಸಾರ ಹಾಲಿನ ಮಡುವಾಗಿತ್ತು; ದೇವೇಂದ್ರನ ನಂದನವಾಗಿತ್ತು. 'ಬಾಗ್ ನೆಪ್ನೈತೆ ಸಂಜೆ' ಎಂದು ರತ್ನ ಗತ ಜೀವನದ ಸುರುಳಿ ಬಿಚ್ಚಿ ಅವಳ ಮುಂದಿಡುವಾಗ ಅವರ ಬದುಕಿನ ಹಿರಿಮೆ ಅಭಿವ್ಯಕ್ತವಾಗುತ್ತದೆ.

ಇದ್ದಾಗ್ ಬಿಷ್ಟ ಯೆಸರು ಯಿಟ್ಟು
ಇಲ್ದಿದ್ರು ಒಟ್ಟೇಗ್ ಬಟ್ಟೇನ್ ಕಟ್ಟು

ಬಟ್ಟೆ ಸಿಗದಿದ್ದಾಗ ಭಿಕ್ಷೆ ಬೇಡುವ ದೈನ್ಯ ಪ್ರವೃತ್ತಿ ಅವರದಲ್ಲ. 'ಬಿಕ್ಸೇಗ್ ಕೈ ತಂದೋನು ಸತ್ತ ನಾಯ್ಗಿಂತ ಕೀಳು' ಎಂಬುದೇ ಅವರ ಅಚಲ ನಂಬಿಕೆ. ತಿನ್ನುವುದೊಂದೇ ಬದುಕಿನ



"ಒಳ್ಳೆ ದೃಶ್ಯಗಳನ್ನು ಸೆನ್ಸಾರ್ ಬೋರ್ಡಿನವರು ಕಟ್ ಮಾಡಿದ್ರು. ಇಲ್ಲಿ ಉಳಿದವನ್ನು ನೀವು ಕಟ್ ಮಾಡ್ತಿದೀರ! ನೀವೂ ಸೆನ್ಸಾರ್ ಬೋರ್ಡಿನವರೇನ್ರಿ?"

ಗುರಿಯುಳ್ಳವೆಂದು ತಿಳಿದು ನಗುನಗುತ್ತಲೇ ಕಾಲ ನೂಕುತ್ತಾರೆ. ಗಂಡ ಹೆಂಡಿರಲ್ಲಿ ಪ್ರೀತಿ ಇಂಗಿತಗಳಿದ್ದರೆ ಸಂಸಾರ ಕೊರಳಿಗೆ ಕಟ್ಟಿದ ಗುಂಡಾಗದೆ ಜೆನ್ನಿಗೆ ಕಟ್ಟಿದ ಬೆಂಡಾಗುತ್ತದೆಂಬುದನ್ನು ಅವರು ಬಾಳಿನಲ್ಲಿ ಆದಿವಾಡಿ ತೋರಿಸುತ್ತಾರೆ.

ಕಷ್ಟ ಸುಕ ಏನ್ ಬಂದ್ರೂನೆ
ನಿನ್ಗೆ ನಾನೆ ನನ್ಗೆ ನೀನೆ
ಮುಳುಗೋನ್ ಬೆನ್ನಿನ್ ಬೆಂಡಿದ್ದಂಗೆ

ಬಡವರ ಕಷ್ಟ ಶ್ರೀಮಂತರಿಗೆ ಅರ್ಥವಾಗುವುದಿಲ್ಲ. ಕಷ್ಟದಲ್ಲಿರುವವರ ಬಿಸಿಯುಸಿರು ಸುಖಲೋಲುಪರಿಗೆ ತಟ್ಟುವುದಿಲ್ಲ. ಬಡವರಿಗೆ ಬಡವರೇ ದಿಕ್ಕು. ತನ್ನ ಬಳಿ ಇದ್ದುದ್ದನ್ನು ನೆರೆಯುವರ ಕೂಡ ಹಂಚಿಕೊಂಡು ಅನುಭೋಗಿಸಿದ್ದಾದರೆ, ಆತ್ಮಕ್ಕೆ ತೃಪ್ತಿಯಾಗುತ್ತದೆ ಬೇರೊಬ್ಬರ ಮುಖದ ನಗುವನ್ನು ಕಾಣುವಂತಾಗುತ್ತದೆ.

ನರಮನಸಾಂತ್ ಉಟ್ಟೋನು
ಪಕ್‌ದೋರ್ ಕಸ್ಟಕ ಆಗದೋನು
ಜೀವ್ದೆಣ! ಭೂಮಿಗೆ ಔನ್ ಬಾರ!

ಸಮಾಜ ಈ ನಿಯಮವನ್ನು ಪಾಲಿಸಿದ್ದಾದರೆ ನಾಡಿನ ಆರ್ಥಿಕ ಕ್ಷೇಮ ಸುಭದ್ರವಾಗುತ್ತದೆ.

ರಾಜರತ್ನಂ ಕರ್ತವ್ಯಪ್ರಜ್ಞೆಯುಳ್ಳ ಶುದ್ಧ ಕರ್ಮಯೋಗಿ ಎನ್ನುವ ವಿಷಯ ಸರ್ವವೇದ್ಯವಾದದ್ದು. ಅವರೆಂದೂ ವಿದ್ಯಾರ್ಥಿಗಳಿಗೆ ವಂಚನೆ ಮಾಡಿದವರಲ್ಲ, ತಾನು ಸೇವೆ ಸಲ್ಲಿಸುತ್ತಿದ್ದ ಸಂಸ್ಥೆಗೆ ಎರಡು ಬಗೆದವರಲ್ಲ. ಕೈ ತುಂಬ ಕೆಲಸವಿಟ್ಟುಕೊಂಡವರಾದ್ದರಿಂದ ಅಧಿಕಾರಕ್ಕೆ ವಿರುದ್ಧ ಸೆಟೆದು ನಿಂತವರಲ್ಲ. ಆದರೂ ಅವರು ತಾಬೇದಾರಿಯ ಕಷ್ಟನಿಷ್ಠುರಗಳನ್ನು ಅನುಭವಿಸಿರಬೇಕು ನಿಶ್ಶಬ್ದವಾಗಿ ಎಲ್ಲ ತಾಳಿಕೊಂಡಿರಬೇಕು. ಅಧಿಕಾರಸ್ಥಾನದಲ್ಲಿ ಜನ ಕುಳಿತರೆಂದರೆ ಅವರ ತಲೆ ನೆಟ್ಟಗೆ ನಿಲ್ಲುವಂತಿಲ್ಲ. ಕಳ್ಳು ಕುಡಿದವರಂತೆ ಹಾರಾಡುತ್ತಾರೆ. ತಂದೆ ತಾಯಿ ಗುರುಹಿರಿಯ

ರನ್ನಲ್ಲ ಮರೆಯುತ್ತಾರೆ. ದುಷ್ಟ ಶಕ್ತಿಗಳ ಜತೆ ಸಖ್ಯ ಬೆಳೆಸುತ್ತಾರೆ; ಸತ್ಯವಂತರಿಗೆ ಕಾಟ ಕೊಡುವುದೇ ಅವರ ಹವ್ಯಾಸವಾಗಿರುತ್ತದೆ; ತಮ್ಮ ಪೋಷಕರಿಂದಲೂ ನಜರು ಮುಜರೆಗಳನ್ನು ನಿರೀಕ್ಷಿಸುತ್ತಾರೆ. ಅಹಂಕಾರವಶರಾಗಿ ಅಕ್ಕಪಕ್ಕದವರೊಡನೆ ದುರುಮುಂಬಿತನದಿಂದ ವರ್ತಿಸುತ್ತಾರೆ; ಅವರ ಬಾಯಲ್ಲಿ ಒಳ್ಳೆಯ ಮಾತು ಹೊರಡುವುದೇ ಇಲ್ಲ. ರಾಜರತ್ನಂ ಅವರಿಗೆ ಅಂಥ ಜನರ ಪರಿಚಯ ಸಾಕಷ್ಟಾಗಿರಬೇಕು. ಆದ್ದರಿಂದಲೇ ಅವರು ಸಾರುತ್ತಾರೆ:

ತಾಬೇದಾರಿ ಒಂದ್ ಸುಡುಗಾಡು!
ಮನ್ಸನ್ ಮಣ್ ಮಾಡ್ತೈತೆ.
ತಾಬೇದಾರ್ರು ಮೇಲ್ನೋರ್ ಎದರು
ಬಾಗ್ ಅನ್ಬಾರ್ದು ಗೊತ್ತು ಅನ್ರೂ
ನರಮನ್ಸಾನ್ನೋನ್ ಸೈಸೋಕೂನೆ
ಮಿತಿ ಅಳತೆ ಐತೆ!

ಎಂದು ಅಧಿಕಾರ ಬಂದಾಗ ಪಿತ್ತ ತಲೆಗೇರದೆ ವಿನಯ ಸತ್ಯ ಪ್ರಾಮಾಣಿಕತೆಗಳಿಂದ ವರ್ತಿಸುವುದು ದೊಡ್ಡತನ 'ಮೊಟಕೋದು ಮಾತ್ರ ದೊಡ್ತನಲ್ಲಾ' ಎಂಬ ಅವರ ಮಾತು ಮೆಚ್ಚಕ್ಕ ನವ ನಾದದ್ದು.

ಬಡವರ ಸಿರಿತನಗಳ ಹಾಗೂ ದೊಡ್ಡಸ್ತಿಕೆ ಚಿಕ್ಕತನಗಳ ಬಗೆಗಿನ ಕೊರಗಿನಿಂದ ರಾಜರತ್ನಂ ಅವರ ಮನಸ್ಸು ನೊಂದಿದೆ, ಬೆಂದಿದೆ, ಕುದಿದಿದೆ. ಆ ನೋವು ಕುದಿಗಳು ಆಗಾಗ್ಗೆ ಕವನ ರೂಪದಲ್ಲಿ ಅಭಿವ್ಯಕ್ತಗೊಂಡಿವೆ. ಲೋಕದಲ್ಲಿರುವುದು ಎರಡೇ ಜಾತಿ: ದುಡ್ ಉಳ್ಳೋರು ದುಡ್ ಇಲ್ದೋರು. ಮೊದಲನೆಯವರು ದುಡ್ಡಿಗೆ ದಾಸರು; ಅವರಿಗೆ ತೃಪ್ತಿಯಿಲ್ಲ; ಅದು ಕೂಡಿದಷ್ಟೂ ಅವರ ದಾಹ ಹೆಚ್ಚುತ್ತದೆ.

ದೊಡ್ಡೋನ್ ಹೊಟ್ಟೆ ಬಲೆ ದೊಡ್ಡಣ್ಣ!
ಕಂಡಿದ್ ಗುಳುಂ! ಸ್ವಾ ಅ!
ತಿಂದಿ ತೇಗ್ತ ಕುಡಿತಿದ್ದಸ್ಟೂ
ಏರ್ತೈತ್ ಅಸುವು ದಾ ಅ!

ಎರಡನೆಯವರು ಇದ್ದಷ್ಟರಿಂದಲೇ
ಗೊಂಡು ಹಾಯಾಗಿರುತ್ತಾರೆ. ಅತೃಪ್ತಿ
ಸಮಾಜನ ಭದ್ರತೆಗೆ ಅಪಾಯ; ಸಂತೃಪ್ತಿ
ಅಪಾಯ. ಕೇವಲ ಹಿಡಿಮಂದಿಯಲ್ಲಿ
ಮಡ ಗೊಂಡದ್ದಾದರೆ ನಾಡಿನ ಆರ್ಥಿಕ
ಸ್ಥಿತಿ ಏರುಪೇರಾಗುತ್ತದೆ; ಹಣಮುಬ್ಬರ
ವಾಗುತ್ತದೆ. ಬಡತನ ಅಪಾಯದ ಮಟ್ಟ
ಮೀರುತ್ತದೆ. ಸುಲಿಗೆಯೇ ದುಡ್ಡುಳ್ಳ ದ
ವರ ಧರ್ಮ, ಅವರ ಪ್ರಾಚೀನ ಕ
ಅವರ ಅಂಗಡಿ, ಗಿರಣಿ ಕಾರ್ಖಾನೆಗಳೇ
ಕೊಳ್ಳೆಯ ಕಾರಾಗಾರಗಳು. ಕೊಕ್ಕರೆ ವಿ
ಹಾವು ಕಪ್ಪೆಗೆ ಹೊಂಚು ಹಾಕಿಕೊಂಡಿ
ಹಾಗೆ ಸಿರಿವಂತ ಧರ್ಮಗಿರ್ಮ ದೇ
ಗೀವರುಗಳನ್ನು ಮೂಲೆಪಾಲು ಮ
ಬಡವರ ರಕ್ತ ಹೀರಲು ತವಕಿಸುತ್ತ
ಚಿಕ್ಕವರ ತ್ಯಾಗದಿಂದ ಜನ ದೊಡ್ಡವರ
ಮತೆ, ಬಡವರ ದುಡಿಮೆಯಿಂದ ಸಿರಿವ
ಬೊಜ್ಜು ಬೆಳೆಯುತ್ತದೆ. 'ಲಕ್ಸ ಚಿಕ್ಕೊ
ಮಾಡಿದ ಕೆಲಸ ದೊಡ್ಡೋನ್ ಒಬ್ಬ
ಎಸರು' ಇದು ದೇಶಕಾಲಾತೀತ ಸತ್ಯ.

ಯಾವ ಸರ್ಕಾರವೇ ಬರಲಿ, ಯಾವ
ನವೇ ರೂಪುಗೊಳ್ಳಲಿ; 'ನಪ್ಟಕ್ ಚಿಕ್ಕ
ಳೋನ್ಗೇನೆ ಮೇಲಿಂದ್ ಮೇಲೆ ಕಸ್ಟ' ಬರು
ಬಡವರ ತೊಂದರೆಗಳು ಬಚ್ಚಲ ಕ್ರಿಮಿ
ಗಳಂತೆ ಹೆಚ್ಚುತ್ತವೆ. ಜೋಗ ಜಲಪಾತದ
ಗಳು ಅವರ ಬಗೆಗಣ್ಣಿಗೆ ಸೌಂದರ್ಯನಿಧಿಗಳ
ತೋರುವುದಿಲ್ಲ. ನಾಡಿನಲ್ಲಿ ಬಡತನ ರ
ತಾಂಡವದಲ್ಲಿ ತಲ್ಲೀನನಾಗಿರುವಾಗ ಸೌ
ರ್ಯೋಪಾಸನೆಗೆ ಸಮಯವಿಲ್ಲ. ದುಡ್ಡುಳ್ಳ
ದುಡ್ಡಿಲ್ಲದವರನ್ನು ಗದರಿಸಿ ಓಡಿಸುವ
ಯನ್ನು ರೋದರಿನ ಸದ್ದು ನೆ
ತರುತ್ತದೆ, ರಾಕೆಟ್ಟು ಬಡವರ ಸಂ
ಸಂಕೇತವಾಗಿದೆ. ಬಡವನನ್ನು ತಿನ್ನುವ
ವಾಗಿ ಬಳುಕುತ್ತ ಬರುವ ಶ್ರೀಮಂತನ
ಲೇಡಿ ಹೋಲುತ್ತದೆ. ಬಡವನ ಬಾ
ಬೇಗಾನ್ ಇಕ್ಕಿ ಬಣ್ಣ ಮೇಲ್ ಬಳ
ಕಾಮನಬಿಲ್ಲು ಹೊಳೆಯುತ್ತದೆ. ಒಟ್ಟಿನಲ್ಲಿ ಅ
ಕಣ್ಣಿಗೆ ಕಾಣಿಸುವುದು ಭುವನಮೋಹಿನಿ

ಜೋಗವಲ್ಲ. ಬಡವರ ಬದುಕನ್ನು ಪ್ರತಿಧ್ವನಿಸುವ ಪ್ರಪಾತ.

ಬಡವನ ಸಹನೆಗೂ ಒಂದು ಮಿತಿಯಿದೆ. ಅವನ ಕೋಪದ ಬಡಬಾಗ್ನಿಗೆ ಸಿಕ್ಕಿದ ಸಿಂಹಾಸನಗಳು ದಗ್ಧಗೊಂಡಿವೆ, ಸರಕಾರಗಳು ಪತನಗೊಂಡಿವೆ, ಶ್ರೀಮಂತರು ಮೃತ್ಯುವಶರಾಗಿದ್ದಾರೆ. ಬಡವರಲ್ಲ ದುರ್ದೈವಿಗಳು, ಪ್ರಪಂಚದ ಇತಿಹಾಸವನ್ನರಿಯದ, ಅರಿತೂ ಅರಿಯದವರಂತೆ ನಟಿಸುವ ಶ್ರೀಮಂತರು.

ಬಡವನ್ ದೇವ್ರನ್ ಕೆರಳಿಸ್ಬಾರ್ದು–
ಲೋಕಕ್ ಒಳ್ಳೇದಲ್ಲ!
ಬಡವನ್ ದೇವ್ರಿಗ್ ನೆರಳಿಲ್ದಿದ್ರೆ–
ಲೋಕಕ್ ಬೆಳಕೇ ಇಲ್ಲ!
ಬಡವನ್ ದೇವ್ರನ್ ಕಣ್ಣ್ ಬಾರ್ದರ್–
ನೀ ಕಂಡಿಲ್ಲ ಅವನ ಯೇಟ !
ಬಡವ್ರೋನ್ ದೇವ್ರು ಲೋಕಾನ್ ನುಂಗೋ
ಜೋಲಾಮುಕಿ! ಯೇಟ!

ಬಡವ ಅತೃಪ್ತಿಯಿಂದಿರುವ ತನಕ ನಾಡಿಗೆ ಕ್ಷೇಮವಿಲ್ಲ, ಸಾಂಸ್ಕೃತಿಕ ಪ್ರಗತಿ ಸಾಧ್ಯವಿಲ್ಲ. ಅವನೀಗ 'ಸರ್ಕಸ್ ಸಿಮ್ಮ'ವಾಗಿದ್ದಾನೆ. ದುಡಿಯುವವ ಒಬ್ಬ, ಪಡೆಯುವ ಮತ್ತೊಬ್ಬ; ಒಬ್ಬನಿಗೆ ಬೋನು, ಮತ್ತೊಬ್ಬನಿಗೆ ಗೌನು. ಅವನನ್ನು ಹೊಗಳಿ ಹೊಗಳಿ, ಮಾತಿನಲ್ಲಿಯೇ ಅಟ್ಟಕ್ಕೇರಿಸಿ, ಅವನ ಹೊಟ್ಟೆಯ ಮೇಲೆ ತಣ್ಣೀರು ಬಟ್ಟೆ ಎಳೆಯುವಲ್ಲಿ ರಾಜಕೀಯ ಪಕ್ಷಗಳ ನಾಯಕರು ಮೇಲಾಟ ನಡೆಸುವುದುಂಟು.

ಸಾಮಾನ್ಯವಾಗಿ ಕಾನೂನು ನಿಯಮಗಳೆಲ್ಲ ದೊಡ್ಡವರ ಪರವಾಗಿರುತ್ತವೆ. ಇಲ್ಲ ದೊಡ್ಡವರಿಗೆ ಅವನ್ನು ಮೀರುವ ಹುನ್ನಾರು ತಿಳಿದಿರುತ್ತವೆ. ಅಂದ ಮೇಲೆ ಶಾಸನಗಳೆಲ್ಲ ಬಡವನ ಸಂಕಟದ ಉಲ್ಬಣಕ್ಕೆ ಕಾರಣವಾಗುತ್ತವೆ. ಬಡವ ತೆಗೆದುಕೊಂಡರೆ ಲಂಚ, ಸಿರಿಯ ಪಡೆಕೊಂಡರೆ ಮುನಾಫೆ; ಬಡವ ಅರಿಯದೆ ಶಾಸನವನ್ನು ಉಲ್ಲಂಘಿಸಿದರೆ ಬೋನು, ಸಿರಿಯ ಅರಿತರಿತೂ ಅತಿಕ್ರಮಿಸಿದರೆ ಗೌನು. ಇದು ದೊಡ್ಡವರೆನಿಸಿಕೊಂಡವರ ಪಳಿನ್ನು. ವರ್ಷೇವರ್ಷೇ ದೊಡ್ಡವರ ಸಂಬಳ ಹೆಚ್ಚುತ್ತಿರುತ್ತದೆ. ಸಣ್ಣವರ ಮತ್ತು ರೈತರ ಉತ್ಪನ್ನ ಖೋತಾ ಆಗುತ್ತದೆ. ಒಂದು ಕಡೆ ಬೋರೆ ಕಾಣಿಸಬೇಕಾದರೆ ಮತ್ತೊಂದು ಕಡೆ ಹಳ್ಳ ಕೆದವಬೇಕಷ್ಟೆ. ದೊಡ್ಡವನಿಗೆ ಹೆಚ್ಚು ಸಂಬಳ ಅಂದರೆ ಸಣ್ಣವರ ಬಾಯಿಗೆ ಮಣ್ಣೇ ಗತಿ. ಹುಲಿ ಮೈ ಬೆಳಸಬೇಕಾದರೆ ಹುಲ್ಲೆ ಬಲಿಯಾಗಲೇಬೇಕು. ಮಹಡಿ ಮೇಲೆ ಮಹಡಿ ಏರಬೇಕಾದರೆ ಗುಡಿ-ಸಲುಗಳಿಗೆ ಬೆಂಕಿ ಬೀಳಲೇಬೇಕು. ಅಂದ ಮೇಲೆ ಬಡವನಿಗೆ ದೇವರೇ ಗತಿ!

'ದೊಡ್ಡೋನು' ಎಂಬ ಪದದ ಕಲ್ಪನೆಯೂ ನಮ್ಮ ಸಮಾಜದಲ್ಲಿ ತೀರ ವಿಚಿತ್ರವಾಗಿದೆ. ಪದವಿ ಹಣ ಎರಡೇ ದೊಡ್ಡತನಕ್ಕೆ ದಾರಿ. ಎಂಥದೇ ದುರ್ಗುಣಗಳಿದ್ದರೂ ಸರಿಯೆ, ಅವೆರಡಿದ್ದರೆ ಮನುಷ್ಯ ದೊಡ್ಡವನಾಗುತ್ತಾನೆ. ಇಲ್ಲ ನಿಕೃಷ್ಟನಾಗುತ್ತಾನೆ. ಎಷ್ಟೇ ಸದ್ಗುಣಗಳಿದ್ದರೂ, ಬುದ್ಧಿ ಪ್ರತಿಭೆಗಳಿದ್ದರೂ,

ಪದವಿ ನೋಡ್ಕೊಂಡ ದೊಡ್ಡೋನ್ ಅನ್ನೋದ್
ಲೋಕಕ್ ಒಂದ್ ಆಳ ರ್‍ವಾಗ

ಇದು ಲೋಕರೂಢಿ. ಮೌಲ್ಯಗಳನ್ನು ಗಾಳಿಗೆ ತೂರಿದ ಜನ ಸಾಮಾನ್ಯರಲ್ಲ, ಬಹು ವಿದ್ಯಾವಂತರು. ಸ್ವಾರ್ಥಕ್ಕಾಗಿ ಅವನ್ನು ತಲೆಯ ಮೇಲೆ ಹೊತ್ತುಕೊಂಡು ಮೆರೆದಾಡುವುದುಂಟು. ಅದೂ ಇರಲಿ: ಹೇಗೆ ಬೇಕಾದರೂ ಮೆರೆಸಲಿ, ಹಣ ಹುಟ್ಟಿ ಇಲ್ಲದವನನ್ನು ನಿಂದಿಸುವ ಮೂರ್ಖತನ ಖಂಡನಾರ್ಹ.

ಚಿಕ್ಕೋರ್ ಸಿಕ್ಕೌರಣ್ಣ ಎಲ್ಲಾರ್ ನೆಗಾಕೆ !
ದೊಡ್ಡೋರ್ ಎಂಗಾಡಿದ್ರು ಎಲ್ಲಾನ ಸೈ!

ಪಟ್ಟಣದ ನಾಗರಿಕರು ವಿಸ್ಕಿ ಕುಡಿದರೆ ಯಾರೂ ಕೇಳುವುದಿಲ್ಲ; ಹಳ್ಳಿಯ ಮುಕ್ಕ ಹೆಂಡ ಕುಡಿದರೆ, ಎಲ್ಲರೂ ಅವನನ್ನು ಬಯ್ಯುವವರೆ. ಬಲಿಷ್ಠರು ವ್ಯಭಿಚಾರ ಮಾಡಿದರೆ ಅವನಲ್ಲಿ ತಾಕತ್ತಿದೆ, ಅವನು ರಸಿಕ ಎಂದು ಪ್ರಶಂಸೆ ಮಾಡುತ್ತಾರೆ. ಸಣ್ಣವನೊಬ್ಬ ಮಾಡಿದರೆ ಬಹಿಷ್ಕಾರಕ್ಕೆ ಗುರಿಯಾಗುತ್ತಾನೆ. ಬಡತನದ ಕಷ್ಟ

ಕಾಪಾಡುಗಾಗಿನ್ನು ಸಂಪತ್ತಿಕೆಯು ಧಾವನ್ನು ನನ್ನು ಮರೆಸುವ ಮಾಂತ್ರಿಕ ರಾಜಪತ್ತ್ಯಂ ನಿಜ ಸಮಾನತೆಯು ಸಮಾಜವಾದವೇ ಲೋಕದ ಕಣ್ಣುಗಳಿಗೆಲ್ಲ ವಿಶ್ವಪಥವೆಂದು ನಂಬಿಕೊಂಡಿದ್ದಂತೆ ತಿಳಿಯುತ್ತದೆ.

ಹೀಗಿನ್ನ ಭಾರತ ಹೇಗಾಯಿತೆಂಬುದು ನೆನೆದು ಪಾಲಿವತ್ಸಂ ಸಂಕಟಪಟ್ಟಿದ್ದುಂಟು. ಕೆಲವೆ ದ್ದುಂಟು. ಹೊಟ್ಟೆಯು ಬಿಟ್ಟು ಹುಟ್ಟಿ 'ಸುಖ ಶಾಂತಿ ತೃಪ್ತಿ ಎಲ್ಲಿಕ್ಕೂ ಬಾಗಿಲು ಮುಚ್ಚಿ-ಕೊಂಡಿದೆ! ವೈಕುಂಠದ ಅಪ್ಪನ ಹಾಗೆ ಇದ್ದ ನಮ್ಮ ದೇಶ – ಈಗ ಹೇಗಿದೆ ನೋಡು! ಕುಂಠಿತ ಕೋಣೆ! ನರಕಕ್ಕೆ ಅಪ್ಪ! ಬದುಕಲು ಸಾಧ್ಯವಿಲ್ಲ!' ಮುನ್ನೂರು ಮೂವತ್ತು ಕೋಟಿ ದೇವರು ಸತ್ತಂತೆ ಬಿದ್ದುಕೊಂಡಿದ್ದಾರೆ. ನಮ್ಮ ಜನರಿಗೆ 'ಹಣದ ಸಂಬಳ ಬೇಕು. ಕಮ್ಯೂನಿಸ್ಟ್ ಕೆಲಸ ಮಾಡಿದ್ದೂನೆ–' 'ದೇವ್ರು ಗಿವ್ರು ಅಷ್ಟೇನು ಇಲ್ಲ, ನಮಗೆ ಈಗ ಉದ್ಧಾರ ಇಲ್ಲ!' ವಿಶ್ವಾಮಿತ್ರನ ಹಾಗೆ ಬೇರೊಂದು ಲೋಕವನ್ನು ಸೃಜಿಸಿಕೊಂಡರೇನೇ ಭಾರತೀಯರ ಉದ್ಧಾರ ಸಾಧ್ಯ ಎನ್ನುವ ಮಾತಿನಲ್ಲಿ ಸರ್ವವ್ಯಾಪಕವಾದ ದೂರದೃಷ್ಟಿ ಇದೆ. ಅಂದರೆ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಬದಲಾವಣೆಗಳಿಂದ ಮಾತ್ರ ನಾಡಿನ ಕಲ್ಯಾಣ ಸಾಧ್ಯವೆಂದೂ ಬರಿಯ ತೇಪೆ ರಿಪೇರಿಗಳಿಂದ ಎಂದೆಂದಿಗೂ ಇದನ್ನು ಸರಿಪಡಿಸಲಾ-ಗದೆಂದೂ ಅವರು ಸ್ಪಷ್ಟಪಡಿಸಿದ್ದಾರೆ.

ದೇಶಾಭಿಮಾನ ಬೇಕು, ಅದಕ್ಕಿಂತಲೂ ವಿಶ್ವಪ್ರೇಮ ದೊಡ್ಡದು. ದೇಶಾಭಿಮಾನವಿಲ್ಲದವನಿಗೆ ವಿಶ್ವಪ್ರೇಮದ ಕಲ್ಪನೆಯೂ ಅಸಾಧ್ಯ. ಆದರೆ ಇಂದು ಲೋಕದ ಪರಿಸ್ಥಿತಿ ಹೇಗಿದೆ? ಶಾಸ್ತ್ರದ ಹೆಸರಿನಲ್ಲಿ. ದೇವರ ಹೆಸರಿನಲ್ಲಿ, ರಾಷ್ಟ್ರದ ಹೆಸರಿನಲ್ಲಿ, ಮತದ ಹೆಸರಿನಲ್ಲಿ ಜನ ಹರಿದು ಹಂಚಿ ಹೋಗಿದ್ದಾರೆ, ಮನ ಛಿನ್ನಭಿನ್ನವಾಗಿದೆ. ಅನೇಕ ಶಾಸ್ತ್ರಗಳು ಬೆಳೆದದ್ದೇ




"ಎಲ್ರಿಗೂ ಕೂಲ್‌ಡ್ರಿಂಕ್ಸ್? ಇದೊಂದು ವಿಷಯದಲ್ಲಾದ್ರೂ ಎಲ್ರೂದೂ ಒಮ್ಮತವಿದೆಯಲ್ಲಾ ಸಂತೋಷ."

ಸ್ವಾರ್ಥಕ್ಕಾಗಿ. ಹೋಗಲಿ. ಆ ಶಾಸ್ತ್ರಗಳಾದರೂ ಮಾನವ ಮಾನವನ ಹೃದಯವನ್ನು ಬೆಸೆಯಲು ಸಾಧ್ಯವಾಯಿತೆ ? ತಮತಮಗೆ ಬೇಕಾದ ಹಾಗೆ ಜನ ಶಾಸ್ತ್ರಗಳನ್ನು ಸೃಷ್ಟಿಸಿಕೊಂಡರು. ಮತಗಳನ್ನು ಹುಟ್ಟು ಹಾಕಿಕೊಂಡರು. ಅದರ ಫಲಶ್ರುತಿ ? 'ಜಾತಿ ನೀರಾಗೊಯ್ತು ಲೋಕ್ದಾಗ್ ಒಗ್ಗಟ್ಟಿನ್ದ್ ಗೋಂದು!' ಲೋಕ ಒಡೆಯದೆ ಒಟ್ಟಾಗುಳಿಯಬೇಕಾದರೆ ಈ ಗೋಂದು ನೀರು ನೀರಾಗಬಾರದು. ಇಂಥ ಪರಿಸ್ಥಿತಿಯನ್ನು ರೂಪಿಸುವ ತನಕ 'ಜೈ ಜಗತ್' ಎನ್ನುವ ಮಂತ್ರ ಅರ್ಥಹೀನವಾಗುಳಿಯುತ್ತದೆ. ಯಾವ ವಿಶ್ವಸಂಸ್ಥೆಯಿಂದಲೂ ಲೋಕದಲ್ಲಿ ಶಾಂತಿ ಸ್ಥಾಪನೆ ಕಷ್ಟವಾಗುತ್ತದೆಂಬುದು ರಾಜರತ್ನಂ ಅವರ ಸ್ಪಷ್ಟ ಮತ.

ಹೀಗೆ ಲೋಕವನ್ನು ನೂರಾರು ಸಾವಿರಾರು ಮುಖಗಳಿಂದ ನೋಡಿ. ಅದರ ಜಾಳಿಯನ್ನು ಕಂಡವರಾಗಿ. ದೀರ್ಘಾನುಭವ, ವಿದ್ವತ್ತು ಬುದ್ಧಿ ಪ್ರತಿಭೆಗಳ ಬೆಳಕಿನಲ್ಲಿ ಜೀವನವನ್ನು ರೂಪಿಸಿಕೊಂಡವರಾಗಿ. ಅವರ ಬದುಕಿನಿಂದ ಸರ್ವಗ್ರಾಹ್ಯವಾದ ತತ್ತ್ವಗಳು ಹೊರಹೊಮ್ಮುವುದು ಸಹಜ. ಇಂದು ನಮ್ಮದು. ನಾಳೆ ಯಾರದೊ ಗೊತ್ತಿಲ್ಲ. ಈ ಹೊತ್ತು ಖುಷಿಪಟ್ಟದ್ದೇ ನಮ್ಮದು ಎಂದು ಹೇಳುವಲ್ಲಿ ಸಿನಿಕತನವನ್ನಾಗಲೀ ನಿರಾಶಾವಾದವನ್ನಾಗಲೀ ಅವರಿಗೆ ಆರೋಪಿಸಲಾಗದು. ಅಶೋಕ ಹೋಟೆಲಿನಲ್ಲಿರುವ ಭಕ್ಷ್ಯಭೋಜ್ಯಗಳನ್ನು ನೆನೆದಳುವುದಕ್ಕಿಂತ, ಮನೆಯಲ್ಲಿರುವ ಅಂಬಲಿಸೊಪ್ಪನ್ನುಂಡು ಸುಖಿಸುವುದು ಮೇಲು. ದುಃಖ ದುಃಖವನ್ನು ಹೆರುತ್ತದೆಯೇ ಹೊರತು ಸುಖವನ್ನಲ್ಲ. ಇಂದು ಸಂದವರು ನಾಳೆಯೂ ಸಲ್ಲುತ್ತಾರೆ, ಇಂದು ಸಲ್ಲದವರು ಎಂದೆಂದೂ ಸಲ್ಲುವುದಿಲ್ಲವೆಂಬ ತತ್ತ್ವ ಅವರದು.

ನಾಳೇನ್ಕೊಂಡಿ ನರಳೋದೆಲ್ಲ
ಬೆಪ್ಗೋಳ್ ಮನಸಿನ್ ಕನಸು!
ನಾಳೆ ಹಾಡು! ನಾಳೆ ಬಾರ!
ಈವತ್ ಇರ್ಲಿ ಮನಸು.

ಈ ಹೊತ್ತು ತಿನ್ನದೆ, ಸುಖಪಡದೆ. ನಾಳೆಗೆಂದು ಉಳಿಸಿಟ್ಟರೆ ಅದು ನಮಗೆ ದಕ್ಕುತ್ತದೆಂದು ಗ್ಯಾರಂಟಿ ಇದೆಯೆ? ಸತ್ತರೆ ಸುಡುಗಾಡೇ ಗತಿ ಕೊನೆಗೆ. 'ಸಾಸ್ವತವ ನೀನು? ಬುಟ್ಟಿಗ್ ಜಿದ್ ಪೀನು!' ಎಂದವರು ಪ್ರಶ್ನಿಸುತ್ತಾರೆ. ಇಂದೇ ಅದನ್ನು ತಾನೂ ಬಳಸಿ ನೆರೆಯವರಿಗೂ ಹಂಚಿಕೊಟ್ಟರೆ, ಆ ಗಳಿಗೆ ಸಾರ್ಥಕವಾಗುತ್ತದೆ.

ಮನುಷ್ಯನ ಪತನಕ್ಕೆ ಚಿಂತೆಯೇ ಮೂಲ. ಅದರಿಂದ ಬುದ್ಧಿ ಮಂದವಾಗುತ್ತದೆ, ಪ್ರತಿಭೆ ಬತ್ತಿ ಹೋಗುತ್ತದೆ, ವಿವೇಕ ನುಸುಳುತ್ತದೆ, ಧೈರ್ಯ ಕುಸಿಯುತ್ತದೆ. 'ಚಿಂತೇಗ್ ಎದೇಲ್ ತಾವ ಕೊಡೋದೂ ಹಾವಿನ ಮುತ್ತಿಕ್ಕೋದೂ ಒಂದೇ.' ಚಿಂತೆಗೆ ಶರಣಾದಾಗಲೇ ವಿನಾಶ ಖಂಡಿತ. ಚಿಂತೆ ದುಃಖಗಳನ್ನು ಇತರರಿಗಂಟಿಸುವುದೂ ತರವಲ್ಲ. ಅವು ಪ್ರಥಮತಃ ಮನಸ್ಸಿನ ಕಲ್ಪನೆ. ಅವುಗಳ ಬಗ್ಗೆ ನಿರ್ಲಕ್ಷ್ಯದಿಂದಿದ್ದರೆ ಅವು ಹತ್ತಿರ ಸುಳಿಯುವುದೇ ಇಲ್ಲ. ಸುಳಿದರೂ ಕಂಡಕಂಡವರ ಬಳಿ ಗೋಳ್ಗರೆದರೆ ಪ್ರಯೋಜನವಾಗದು.

ದುಕ್ಕಾನ್ ಒತ್ಕೊಂಡ್ ಬಂದೋರ್ ನಾವು!
ಒತ್ಕೊಂಡ್ ಓಗೋರ್ ನಾವು
ಸಿಕ್ಕೋರತ್ರ ಯೋಳ್ಕೊಂಡಾಕ್ಸೆ
ಆರೋಗ್ತೈತ ಕಾವು!

ಕರ್ತವ್ಯ ಶ್ರದ್ಧೆಯೊಂದಿದ್ದರೆ ಚಿಂತೆ ದುಃಖಗಳಿಗೆ ಸಮಯವೇ ಇರುವುದಿಲ್ಲ. ದುಃಖ ಕ್ಲೇಶಕಾರಿ ಎಂತೋ ಶುದ್ಧಕಾರಕವೂ ಅಹುದು.

ರಾಜರತ್ನಂ ವಿಧಿ ದೇವರುಗಳಲ್ಲಿ ವಿಶ್ವಾಸವುಳ್ಳವರು. ನಸೀಬೊಂದಿದ್ದ ಪಕ್ಷದಲ್ಲಿ 'ಕಂಡಿದ್ ನೀರೂ ಯೆಂಡಾಗ್ತೈತೆ!' ಅದು ಖೋಟಾ ಆದ್ರೆ 'ಎಲ್ಲಾರ್ ಬೆನ್ನೂ ಗೂನೆ!' ದೇವರ ಧ್ಯಾನ ನಾಮೋಚ್ಚಾರಣೆ ಶ್ರವಣಗಳಿಂದಲೇ ದುಃಖ ಮಾಸು, ಮನಸ್ಸು ಹಗುರವಾಗುತ್ತದೆಂಬುದು ಅವರ ನಿಶ್ಚಲ ನಂಬಿಕೆ.

ನಂ ತಾಪತ್ರೇನ್ ಮುಳಗಿಸ್ತೈತೆ
ಭಗವಂತ್ನ್ ಎಸರಿನ್ ಸಕ್ತಿ

ದೇವರ ಇರವು ಇಲ್ಲಗಳ ಬಗ್ಗೆ ತರ್ಕವಾದ ಅನಾವಶ್ಯಕ; ಅದು ಪ್ರಾಚೀನ ಕಾಲದಿಂದ ನಡೆದೇ ಇದೆ. ಉಂಟು ಎಂದವರಿದ್ದಾರೆ. ಇಲ್ಲ ಎಂದವರಿದ್ದಾರೆ. ಅವನಿದ್ದಾನೆನ್ನುವುದಕ್ಕೆ ಸೂರ್ಯ ಸಾಕ್ಷಿ, ತರುಲತೆಗಳು ಸಾಕ್ಷಿ, ಪ್ರಾಣಿಕೋಟಿಯೇ ಸಾಕ್ಷಿ. ಅದೇನೇ ಇರಲಿ,

ದೇವ್ರು ಔನ್, ಅಂತ ನಂಕೊಳ್ಳಾದು
ನಮಗೆ ಜೀವ – ಉಸರು!
ಔನಲ್ ನಮ್ಮ ಮಡಿಕ್ಕಳ್ಳಾದು
ನಮಗೆ ನಮ್ದೆ ನಸರು

ಎನ್ನುವಲ್ಲಿ ಅವರ ಶ್ರದ್ಧೆ ಮಾತ್ರ ಸಂದೇಹ ದೂರವಾದದ್ದು.

ಒಟ್ಟಿನಲ್ಲಿ 'ರತ್ನನ ಪದಗಳು' ರಾಜರತ್ನ ನಂಬಿಕೊಂಡಿದ್ದ, ಹಾಗೂ ಆಚರಣೆಯಲ್ಲಿ ತರುತ್ತಿದ್ದ ಜೀವನ ಮೌಲ್ಯಗಳಿಗೆ ಕನ್ನಡಿ ಹಿಡಿಯುತ್ತವೆ. ಇಲ್ಲಿ ಬಳಸಿರುವ ಭಾಷೆ, ಹೇಳುವ ಗತ್ತುಗಳನ್ನು ಗಮನಿಸಿದಾಗ, ಹೆಂಡ ಕುಡಿದು, ಅಮಲೇರಿರುವವನ ಗೈರತ್ತನ್ನು ಅವು ಸಮರ್ಥಿಸುವಂತೆ ತೋರುತ್ತದೆ. ಆದರೆ ಪದಗಳ ಆಳಕ್ಕೆ ಮುಳುಗಿ ನೋಡುವಾಗ, ಜೀವನ ಶ್ರದ್ಧೆಯುಳ್ಳ, ಭಗವಂತನಲ್ಲಿ ಅನನ್ಯ ಭಕ್ತಿಯುಳ್ಳ, ಶ್ರೇಷ್ಠ ಸಾಧಕನೊಬ್ಬನ ಸ್ವಾನುಭವ ಸ್ವಾನುಸ್ಥಾನದಿಂದ ಹೊರಹೊಮ್ಮಿರುವ ಚಿರಂತನ ಮೌಲ್ಯಗಳಿಗೆ ಅವು ಆಕರವಾಗಿರುವಂತೆ ತೋರದಿರಲಾರದು. ಮುನಿಯನ ಹೆಂಡದಂಗಡಿ ಈ ಪದಗಳ ಉಗಮಕ್ಕೆ ನೆಪವಾಗಿರಬಹುದಾದರೂ ಹೆಂಡ ಎಂಬ ಪದ ಅನೇಕ ಕಡೆ ಆವೇಶಪೂರಿತವಾದ ಭಕ್ತಿಗೂ ಕಾವ್ಯರಸಕ್ಕೂ ಸಂಕೇತವಾಗುತ್ತದೆ. 'ಪ್ರಾರ್ಥನೆ' ಎಂಬ ಪದದಲ್ಲಿ ಉಕ್ಕುತ್ತಿರುವ ಭಾವಲಹರಿಯೇ ಈ ಮಾತಿಗೆ ನಿದರ್ಶನವಾಗುತ್ತದೆ.

ಸೂತ್ರುದ ಗೊಂಬೆ ಇದ್ದಂಗ್ ಇದ್ನಿ
ಯೆಂಡದ್ ಕೈಲಿ ನಾನು
ಯೆಂಗ್ ಆಡಂದ್ರೆ ಅಂಗ್ ಆಡ್ತೇಕು!
ಸಂಗೀ ಜಂಬದಿಂದ್ ಏನು!

ಎನ್ನುವ ಮಾತುಗಳು ಉಮರ್ ಖಯ್ಯಾಮನ ನುಡಿಗಳನ್ನು ನೆನಪಿಗೆ ತರದಿರಲಾರವು. ಇಂಥ ಕಡೆ ಯೆಂಡಕ್ಕೆ ಲೋಕರೂಢಿಯ ಅರ್ಥವಿರ ಲಾರದೆಂಬುದು ಸ್ಪಷ್ಟ.

ಹೆಂಡದ ಮಹಿಮೆಯಿಂದ ಇಂಥ ಪದಗಳ ಉದಯಿಸುವುದಾದರೆ ಗ್ರಂಥಗಳ ಸಂಗ್ರಹಕ ಭೂಮಿಯ ಮೇಲೆ ಜಾಗವೇ ಸಿಗುತ್ತಿರಲಿಲ್ಲ ಕುಡಿತ ಕೆಟ್ಟದ್ದೆನ್ನುವ ಮಾತಂತೂ ಹಲವು ಕಡ ಬರುತ್ತವೆ. ಉದಾಹರಣೆಗೆ 'ಮುನಿಯನ್ ಮೊಕ್ಕೆ ಮೂರ್ ನೀರು' ಕವಿತೆ. ವ್ಯಂಗ್ಯವಂತೂ ಉದ್ದಕ್ಕೂ ಇದ್ದದ್ದೇ.

ಯೋಕ್ಲಾನ್ ಕೈನ ಬರೆದೋಲೆಟ್ಟು –
ಇಪ್ಪತ್ತಿಂದ ಯೆಂಡ ಬುಕ್ಕು
ಮಾನಸ್ ಬುಕ್ಕಕ್ಕೊಂಡ!

ಆದ್ದರಿಂದ ಸಾಮಾನ್ಯರು ಸಹ ತಪ್ಪು ತಪ್ಪಾಗಿ ಈ ಪದಗಳ ಅರ್ಥವನ್ನು ಗ್ರಹಿಸಲಾರ ರೆಂದು ತಿಳಿಯಬಹುದಾಗಿದೆ. 'ಯೆಂಡ'ದ ನಿಜ ವಾದ ಅರ್ಥವನ್ನು ಗ್ರಹಿಸಿಕೊಂಡಾಗ ಈ ಪದ ಗಳ ಅಂತರಾಳದಲ್ಲಿ ಹುದುಗಿರುವ ಭಾವಾ ಲೋಚನೆ ಹಾಗೂ ಲೋಕಾನುಭವಗಳ ಶ್ರೀಮಂ– ತತೆ ಮನವರಿಕೆಯಾಗುತ್ತದೆ. ರಾಜರತ್ನಂ ಅವರ ಬದುಕು ಎಷ್ಟು ಹಿರಿದಾದುದೆನ್ನುವುದಕ್ಕೆ ಈ ಪದಗಳೇ ಸಾಕ್ಷಿ. ಇವುಗಳಲ್ಲಿ ಅವರ ಆತ್ಮಕಥೆ ಹಾಸು ಹೊಕ್ಕಾಗಿ ಹೆಣೆದುಕೊಂಡಿದೆಯೆಂಬ ಮತ್ತು ಅವರ ಜೀವನ ತತ್ತ್ವ ಸಂದೇಶಗಳು ಅಡಕ ಗೊಂಡಿವೆಯೆಂಬ ಸಂಗತಿ ಅವರ ಬದುಕನ್ನು ದೂರದಿಂದ ನೋಡಿದವರಿಗೂ ತಿಳಿಯುತ್ತದೆ.

ಮನ್ಸನ್ ಜೀವ ತಿಳಕೊಳ್ದೇನೆ
ಸುಂಕೆ ನೋಯಿಸ್ಬಾರ್ದು

✡



ಮಕ್ಕಳೇ ರಾಷ್ಟ್ರದ ಸಂಪತ್ತು.
ಅವರಿಗೆ ಪುಷ್ಟಿಕರ ಆಹಾರ ಕೊಟ್ಟು ಬೆಳೆಸಿ.

---

# ಕರ್ನಾಟಕದಲ್ಲಿ ಪೌಷ್ಟಿಕ ಆಹಾರ ಕಾರ್ಯಕ್ರಮ

---

ಎಳೆಯ ವಯಸ್ಸಿನಲ್ಲಿ ಕೊಡುವ ಆಹಾರ ಪುಷ್ಟಿಕರವಾಗಿದ್ದರೆ ಮಕ್ಕಳ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಗೆ ನೆರವಾಗುತ್ತದೆ. ಈ ಕಾರ್ಯಕ್ರಮಕ್ಕಾಗಿ ಸರಕಾರವು ಪ್ರಸಕ್ತ ವರ್ಷ 378·76 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲಿದೆ.

ಪೌಷ್ಟಿಕ ಆಹಾರ ಕಾರ್ಯಕ್ರಮವು ಭಾವೀ ಜನಾಂಗವನ್ನು ಸದೃಢವನ್ನಾಗಿ ಮಾಡುವುದರಿಂದ ಶಾಲಾ ಮಕ್ಕಳಿಗೆ ಪೌಷ್ಟಿಕ ಆಹಾರ ನೀಡುವ ಬಗ್ಗೆ ಸರಕಾರವು ವಿಶೇಷ ಗಮನಕೊಟ್ಟಿದೆ.

ಪ್ರಸಕ್ತ ವರ್ಷ ಪ್ರಾಥಮಿಕ ಮತ್ತು ಪ್ರಾಥಮಿಕ ಪೂರ್ವ ಶಾಲೆಯ 2·4 ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಉಪಹಾರ ನೀಡುವ ಯೋಜನೆಗಾಗಿ 215 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

ಅನ್ವಯಿಕ ಪೌಷ್ಟಿಕ ಆಹಾರ ಕಾರ್ಯಕ್ರಮವನ್ನು ಮುಂದುವರಿಸುವ ಸಲುವಾಗಿ ಈ ವರ್ಷ 21·75 ಲಕ್ಷ ರೂಪಾಯಿಗಳ ಅವಕಾಶ ಮಾಡಿಕೊಡಲಾಗಿದೆ.

ಉಳಿದ 142 ಲಕ್ಷ ರೂಪಾಯಿಗಳನ್ನು ವಿಶೇಷ ಪೌಷ್ಟಿಕ ಆಹಾರ ಕಾರ್ಯಕ್ರಮಕ್ಕಾಗಿ ಮೀಸಲಾಗಿಡಲಾಗಿದೆ.

ರಾಜ್ಯದಾದ್ಯಂತ ವಿವಿಧ ಜಿಲ್ಲೆಗಳಲ್ಲಿರುವ 20 ಅಭಿವೃದ್ಧಿ ಬ್ಲಾಕುಗಳಲ್ಲಿ ತಲಾ 100 ಅಂಗನವಾಡಿ ಮೂಲಕ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ. ಇವರಲ್ಲಿ ಮಕ್ಕಳು ತಾಯಂದಿರು ಹಾಗೂ ಬಾಣಂತಿಯರಿಗೆ ಪೌಷ್ಟಿಕ ಆಹಾರ ಒದಗಿಸಲಾಗುತ್ತಿದೆ.

---

ಪ್ರಕಟಣೆ :— ಕರ್ನಾಟಕ ಸರಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.

# ನಗೆಮಲ್ಲಿಗೆ

ಕ್ಯಾಪ್ಟನ್ : ಸೆಂಟ್ರಿ...
ಸೆಂಟ್ರಿ : (ಗಡಬಡಿಸಿಕೊಂಡು) ಸಾರ್...
ಕ್ಯಾಪ್ಟನ್ : ಡ್ಯೂಟಿ ಮೇಲಿದ್ದೂ ನಿದ್ದೆ ಮಾಡ್ತೀಯಾ?
ಸೆಂಟ್ರಿ : ಇಲ್ಲ ಸಾರ್.
ಕ್ಯಾಪ್ಟನ್ : ಇಲ್ಲ-ನೀನು ನಿದ್ದೆ ಮಾಡ್ತಿದ್ದೆ.
ಸೆಂಟ್ರಿ : ಹೌದು ಸಾರ್.
ಕ್ಯಾಪ್ಟನ್ : ಮತ್ತೆ, ಸುಳ್ಯಾಕೆ ಬೊಗಳ್ದೆ?
ಸೆಂಟ್ರಿ : ಸಾರ್, ಮೊದ್ಲು ನನಗ್ಗೊತ್ತಿರ್ಲಿಲ್ಲ. ನೀವ್ಹೇಳಿದ್ಮೇಲೆ ಗೊತ್ತಾಯ್ತು ನಾನು ನಿದ್ದೆ ಮಾಡ್ತಿದ್ದೇಂತ.

•

ಮೃತ್ಯುವಿನ ಭಯಂಕರತೆಯನ್ನು ವಿವರಿಸುತ್ತ ದೊಡ್ಡ ಉಪನ್ಯಾಸ ನೀಡಿದ ಪಂಡಿತರು ಕೊನೆಗೆ, "ಭಗವಂತನ ಮಹಿಮೆ ಅಪಾರವಾದ್ದು. ಮೃತ್ಯು ಭಯಂಕರವಾಗಿದ್ದರೂ ಭಗವಂತನ ದಯೆಯಿಂದ ನಮ್ಮ ಬಾಳಿನ ಕೊನೆಗೆ ಆ ಮೃತ್ಯು ಆಕ್ರಮಿಸಿಕೊಳ್ಳುತ್ತದೆ. ಒಂದು ವೇಳೆ ಅದು ನಮ್ಮ ಬಾಳಿನ ಮೊದಮೊದಲೇ ಆಕ್ರಮಿಸಿಕೊಂಡುಬಿಟ್ಟರೆ, ಇಲ್ಲ ನಡುವಯಸ್ಸಿನಲ್ಲಿ ಆಕ್ರಮಿಸುವಂತಿದ್ದರೆ ನಾವೆಲ್ಲ ಎಷ್ಟು ಕಷ್ಟಪಡಬೇಕಾಗುತ್ತಿ ಗೊತ್ತೆ?" ಎಂದು ಕೇಳಿ ಭಾಷಣ ಮುಗಿಸಿ ಮೂಗಿಗೆ ನಸ್ಯ ಏರಿಸಿದರು. ಶ್ರೋತೃಗಳು ಮಿಕಿ ಮಿಕಿ ಮುಖ ನೋಡಿದರು.

•

ಆಕೆ : ಏನೇ ರೀಟಾ, ನಿನ್ನ ಫ್ರೆಂಡ್ ಬೀನಾ ನಿನ್ನ ಶ್ರೀಮಂತ ಆಂಟೀ ಹತ್ರ ಕರ್ಕೊಂಡ್ ಹೋಗಬೇಕೂಂತಿದ್ದೆಲ್ಲ ಏನಾಯ್ತು?
ಈಕೆ : ಹಾಳಾಯ್ತು...
ಆಕೆ : ಯಾಕೇ ಹಾಗಾಡ್ತೀ...
ಈಕೆ : ಆತ ಈಗ ನನ್ನ ಅಂಕಲ್ ಆಗಿಬಿಟ್ಟ ಕಣೆ.

•

ಈತ : ಅರೆರೆ- ಏ - ದಾಡಿ ಕೆತ್ತು ಅಂದ್ರೆ ಚರ್ಮಾನೂ ಕೆತ್ತೀಯಲ್ಲೋ...
ನಾಪಿತ: ಕ್ಷಮಾಮಾಡ್ರಿ - ಬರೆ ದಾಡಿ ಕೆತ್ತಿದ್ದಕ್ಕಷ್ಟs ರೊಕ್ಕಾ ಕೊಡ್ರಿ, ಅಯ್ಯಾ...?

•

ನಾಪಿತನ ಕತ್ತಿ ಬಲು ರಭಸದಿಂದ ಕೆನ್ನೆ, ಕತ್ತಿನ ಮೇಲೆ ಓಡಾಡುತ್ತಿತ್ತು. ಆಗ ಗಿರಾಕಿ, "ನಿನ್ಹತ್ರ ಇನ್ನೊಂದು ಕತ್ತಿ ಇದೆಯೇನಯ್ಯಾ?" ಎಂದ. "ಯಾಕೆ ಸಾಹೇಬ್ರೆ?" ಕೇಳಿದ ನಾಪಿತ. "ಯಾಕಂದ್ರೆ- ನನ್ನ ರಕ್ಷಣೆ ಮಾಡ್ಕೊಳ್ಳಿಕ್ಕೆ..."

•

ದೊಡ್ಡ ಮೀನೊಂದು ಚಿಕ್ಕ ಮೀನನ್ನು ಚೆನ್ನಟ್ಟಿ ಇನ್ನೇನು ನುಂಗಬೇಕೆಂದು ಬಾಯಿ ತೆರೆಯುತ್ತಿರುವಂತೆಯೇ, "ಇದು ಅನ್ಯಾಯ, ನನಗೂ ಬದುಕೋ ಅಧಿಕಾರ ಇದೆ. ಕಾನೂನಿನ ದೃಷ್ಟಿಯಲ್ಲಿ ಎಲ್ಲ ಮೀನುಗಳೂ ಸಮಾನ," ಎಂದು ಕೂಗಾಡಿತು ಚಿಕ್ಕ ಮೀನು.

ದೊಡ್ಡ ಮೀನು ನಕ್ಕು, ಶಾಂತಸ್ವರದಲ್ಲಿ ಹೇಳಿತು: "ಅರೆ, ಕಾನೂನಿನ ಮಾತ್ಯಾ-



"ನಾನು ಆರಿಸಿಬಂದ ಕ್ಷೇತ್ರ ಪೂರ್ತಿ ಮುಳುಗ್ಹೋಗಿದೆಯಲ್ರೀ...ಬೇಗ ನಡೀರಿ. ಮುಂದಿನ ಚುನಾವಣೆಗೆ ಬೇರೆ ಕ್ಷೇತ್ರ ನಿರ್ಧರಿಸಬೇಕು..."

ಕಾಡ್ತಿ? ನಾನು ನಿನ್ನನ್ನ ನುಂಗಬಾರದೂಂತ ನಿನ್ನಿಚ್ಛೆ, ಹೌದಾ? ಒಪ್ಪಿದೆ. ಆದರೆ ಒಬ್ಬರನ್ನೊಬ್ಬರು ನುಂಗಿ ನೀರು ಕುಡಿದ್ರೇನೇ ಬದುಕೋದು. ಬದುಕೋದು ಮುಖ್ಯ. ಸರಿ, ನಾನು ನಿನ್ನನ್ನ ನುಂಗೋದಿಲ್ಲ— ನೀನೇ ನನ್ನನ್ನ ನುಂಗಿಬಿಡು. ಆಯ್ತಾ?"

*

ಜೋರಿನಿಂದ ಹೊರಟ ಕಾರನ್ನು ಟ್ರಾಫಿಕ್ ಪೋಲೀಸ್ ತಡೆದು ಡ್ರೈವರನನ್ನು ತರಾಟೆಗೆ ತೆಗೆದುಕೊಂಡ: "ಏನಯ್ಯಾ, ರೆಡ್ ಲೈಟ್ ಕಾಣಿಸ್ಲಿಲ್ವೆ?"

"ಕಾಣಿಸ್ತು."

"ಮತ್ಯಾಕೆ ನಿಲ್ಲಿಸ್ಲಿಲ್ಲ?"

"ನೀವು ಕಾಣಿಸ್ಲಿಲ್ಲ..."

*

ಬಹಳ ದಿನಗಳ ನಂತರ ಭೇಟಿಯಾದ ಗೆಳೆಯನನ್ನು ನರಸಿಂಹ ಭಟ್ಟರು ಕೇಳಿದರು:

"ಹೂಂ. ನಾಲ್ಕು ಜನಾ ಗಂಡು ಮಕ್ಕಳು ಅನ್ನಿ..."

"ಹೌದು. ಮೊದಲ್ನೆಯವ ಎಂಜನಿಯರು."

"ಹೂಂ."

"ಎರಡ್ನೆಯವ ಆರ್ಕಿಟೆಕ್ಟು?"

"ಹೂಂ. ಪರವಾಗಿಲ್ಲ."

"ಮೂರ್ನೆಯವ ಪ್ಲೀಡರು..."

"ನಾಲ್ಕನೆಯವ?"

"ಲೋಫರು..."

"ಅಬಾಬಾ...ಅವ್ನಿಗೂ ಒಳ್ಳೆ ಸಂಬಳಾನೆ ಇರಬೇಕಲ್ಲ..."

*

"ಅಭ್ಯಾಸ ಮಾಡಿದ್ರೆ ಯಾರೂ ಸಾಯೋದಿಲ್ಲ, ಸತ್ತಿಲ್ಲ...ತಿಳೀತಾ?" ಉಡಾಳ ಮಗನಿಗೆ ಅಪ್ಪ ಹೇಳಿದ.

"ಹೌದು. ಗೊತ್ತು."

"ಹಾಗಾದ್ರೆ ಯಾಕೆ ಅಭ್ಯಾಸ ಮಾಡೋದಿಲ್ಲ?"

"ಸಾಯೋ ಚಾನ್ಸ್ಯಾಕೆ ನೋಡ್ಬೇಕೂಂತ..."

*

ಶಿಕ್ಷಕ: ಮೇಲ್ಸಂಪಾದನೆ ಅಂದರೇನು? ಒಂದು ಉದಾಹರಣೆ ಕೊಡಿ.

ವಿದ್ಯಾರ್ಥಿ: ಮೇಲೆ ಹತ್ತಿ ಕೆಲಸ ಮಾಡಿ ಸಂಪಾದಿಸುವುದಕ್ಕೆ ಮೇಲ್ಸಂಪಾದನೆ ಅನ್ನುತ್ತಾರೆ. ಉದಾಹರಣೆಗೆ ವಿದ್ಯುತ್ಕಂಬ-ಟೆಲಿಫೋನ್ ಕಂಬ ಏರಿ ಕೆಲಸ ಮಾಡುವವರು ಪಡೆಯುವ ಸಂಬಳ.

*

ಶಿಕ್ಷಕ: ಒಂದು ಕೋಳಿ ದಿನಕ್ಕೆರಡು ಮೊಟ್ಟೆ ಕೊಡುತ್ತದೆ. ಅಂದರೆ ವಾರಕ್ಕೆಷ್ಟು ಕೊಡುತ್ತದೆ?

ರಾಮು: ಹನ್ನೆರಡು ಸರ್.

ಶಿಕ್ಷಕ: ಹನ್ನೆರಡಾ? ಹೇಗೆ?

ರಾಮು: ರವಿವಾರ ಸೂಟಿ ತೆಗೆದುಕೊಳ್ಳುವುದರಿಂದ.



"ಮುಂದೆ ಸರಿಯಾಗಿ ನೋಡಿಕೊಂಡು ಬನ್ರಿ... ಇಂಥ ಅಜಾಗರೂಕತೆಯಿಂದಾನೇ ಅಪಘಾತ ಸಂಭವಿಸೋದು..."





# ಸದಾಶಿವನ ಮಜಾ ದಿನ

**ಇದೊಂದು ನೀಳ್ಗತೆ—'ಕಸ್ತೂರಿ'ಯ ಬೆಳ್ಳಿ ಹಬ್ಬದ ವಿಶೇಷ ಸಂಚಿಕೆಗೆಂದು ಆಮಂತ್ರಿತವಾದದ್ದು. ಲೇಖಕ ಶ್ರೀ ಸಂಜೀವರಾಯರು ಕನ್ನಡದಲ್ಲಿ ಸಮರ್ಥ ಬರಹಗಾರರು ಮಾತ್ರವಲ್ಲ, ಜಗತ್ತನ್ನು ವಸ್ತುನಿಷ್ಠ ದೃಷ್ಟಿಯಿಂದ ನೋಡಬಲ್ಲ ಕಲಾವಿದ. ಬಹುಕಾಲ 'ಇಂಡಿಯನ್ ಶಿಪ್ಪಿಂಗ್' ಪತ್ರಿಕೆಯಲ್ಲಿ ಕೆಲಸ ಮಾಡಿದ ಅವರು ನೌಕಾಸಾರಿಗೆಗೆ ಸಂಬಂಧಿಸಿದ ಜಗತ್ತಿನಲ್ಲಿಯ ಅನೇಕ ಪ್ರಮುಖ ಪತ್ರಿಕೆಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದಾರೆ. ವ್ಯಾವಹಾರಿಕ ಜಗತ್ತಿನಲ್ಲೂ ಕಲಾವಿದನ ಸೂಕ್ಷ್ಮ ಸ್ಪಂದನವನ್ನು ಅವರು ತಮ್ಮ ಲೇಖನಿಯಲ್ಲಿ ಉಳಿಸಿಕೊಂಡಿದ್ದಾರೆಂಬುದನ್ನಿಲ್ಲಿ ಕಾಣಬಹುದು.**

ಹತ್ತು ರೂಪಾಯಿಯ ಐದು ಹೊಸ ಗರಿಗರಿ ನೋಟುಗಳು. ಅವುಗಳ ಮೇಲೆ ಬೆರಳಾಡಿಸುತ್ತಾ, ಸದಾಶಿವ ಯೋಚಿಸಿದ. ಇಷ್ಟು ಹಣ ಕೊಡುವ ಔದಾರ್ಯ ಸೇಠಜೀಗೆ ಹೇಗೆ ಬಂತು? ತನಗೆ ವಹಿಸಿದ್ದ ವಿಜಾಪುರದ ಅರಳೆ ವ್ಯವಹಾರದಲ್ಲಿ ಸದಾಶಿವ ಜಾಣ್ಮೆಯಿಂದ ವರ್ತಿಸಿದ್ದ. ನಿಜ. ಅದರಿಂದ ಸೇಠಜೀಗೆ ಸಾವಿರಾರು ರೂಪಾಯಿ ಲಾಭ ಆಗಿರಲೂ ಸಾಕು. ಆದರೆ ತಾನು ಸೇಠಜಿಗೆ ಲಾಭಕರ ವ್ಯವಹಾರ ಗಿಟ್ಟಿಸಿಕೊಟ್ಟದ್ದು ಇದೇ ಮೊದಲನೇ ಬಾರಿ ಏನೂ ಅಲ್ಲ. ಹಿಂದೆಂದೂ ಸೇಠಜಿ ತನ್ನ ಔದಾರ್ಯವನ್ನು ಹಣ ಕೊಡುವ ಮೂಲಕ ವ್ಯಕ್ತಪಡಿಸಿರಲಿಲ್ಲ. ಸೇಠಜೀಯ ಔದಾರ್ಯ ಯಾವಾಗ ಎತ್ತ ಕಡೆ ಹರಿಯುತ್ತೆ ಎಂಬುದು ಒಂದು ಗೂಢ ಎಂದು ಸದಾಶಿವ ತನಗೆ ತಾನೇ ಕುಹಕವಾಗಿ ನಗುತ್ತಾ ಅಂದುಕೊಂಡ. ಹಾಗೇ ಬಹಳ ಜಾಗರೂಕತೆಯಿಂದ ನೋಟುಗಳನ್ನು ತನ್ನ ಪರ್ಸಿನಲ್ಲಿ ಸೇರಿಸಿದ. ಕೇವಲ ಒಂದು ತಿಂಗಳ ಹಿಂದೆ ಅವನ ಹನ್ನೊಂದು ವರ್ಷದ ತಂಗಿ ಸಕ್ಕೂ ಹೆಣೆದುಕೊಟ್ಟಿದ್ದ ಪರ್ಸ್ ಅದು.

ಅನಿರೀಕ್ಷಿತವಾಗಿ ಭಾಗ್ಯ ಒಲಿದುಬಂದಿತ್ತು. ಮನೆಗೆ ಬರುತ್ತಾ ಸದಾಶಿವ ತನ್ನ ಮನಸ್ಸನ್ನು ಆ ಭಾಗ್ಯದ ಸುತ್ತ ಹರಿದಾಡಲು ಬಿಟ್ಟ. ಈ ಐವತ್ತು ರೂಪಾಯಿಗಳು ಯಾವ ದಾರಿ ಸೇರುತ್ತವೆಯೆಂದು ಅವನಿಗೆ ಖಚಿತವಾಗಿ ಗೊತ್ತಿತ್ತು. ಎಂಟು ವರ್ಷಗಳ ಹಿಂದೆ, ತನ್ನ ತಂದೆ ಸತ್ತಾಗ ಸೇಠಜಿ ಬಳಿ ಕೆಲಸಕ್ಕೆ ಹಾಜರಾಗಿದ್ದ. ಅಂದಿನಿಂದ ಅವನು ದುಡಿದು ಉಳಿಸಿದ ಪ್ರತಿಯೊಂದು ರೂಪಾಯಿಯೂ ಹೋದೆಡೆಯೇ ಇದು ಹೋಗುವುದು – ಸಕ್ಕೂ ಮದುವೆಗೆ ವರದಕ್ಷಿಣೆಯಾಗಿ. ಈಗಾಗಲೇ ಕೂಡಿಟ್ಟಿದ್ದ ಸಾವಿರಕ್ಕೂ ಮಿಕ್ಕಿದ ದುಡ್ಡು ಗಂಟಿಗೆ ಇದೂ ಹೋಗಿ ಸೇರುವುದು.

ಸದಾಶಿವನ ಕಳೆದೆಂಟು ವರ್ಷಗಳ ಬಾಳಂತೆ ಈ ವರದಕ್ಷಿಣೆ ಗಂಟಿನ ಸುತ್ತ ಹೆಣೆದುಕೊಂಡಿತ್ತು. ಅವನ ಮನೆತನ ಹಿಂದೊಮ್ಮೆ ಹೆಸರುವಾಸಿಯಾದದ್ದು. ಈಗ ಒಂದೆರಡು ತಲೆಮಾರಿನಿಂದ ಬಡತನದಲ್ಲಿ ಬಿದ್ದಿತ್ತು. ಮನೆತನದ ಹಿಂದಿನ ಹೆಸರಿಗೆ ತಕ್ಕಂಥ ಗಂಡು ಹುಡುಕಬೇಕು. ಸಕ್ಕೂಗೆ. ಇದಕ್ಕಾಗಿ ಬೇಕು ಸಾಕಷ್ಟು ವರದಕ್ಷಿಣೆ. ಈ ಹಣ

ತಾನೂ ತನ್ನ ಸ್ನೇಹಿತ ವಿನಾಯಕನಂತೆ ಆರಾಮ ಜೀವನ ನಡೆಸಬಹುದು ಎಂದು ಬಯಸಿದ್ದ. ವಿನಾಯಕನಿಗೆ ಚೆಲುವಾದ ಮಡದಿ ಇದ್ದಳು. ಸಂಸಾರದ ಎಲ್ಲಾ ಭಾರವನ್ನು ತಾನೇ ಹೊತ್ತುಕೊಂಡಿದ್ದಳು. ಅಂಗಡಿಗೆ ಹೋಗುವುದು, ಬಟ್ಟೆ ಹೊಲಿಸುವುದು, ಮನೆ ಹೊರಗಿನ ಒಳಗಿನ ಎಲ್ಲಾ ಕೆಲಸಗಳನ್ನೂ ತಾನೇ ನಿರ್ವಹಿಸುತ್ತಿದ್ದಳು. ವಿನಾಯಕ ಆರಾಮವಾಗಿ ಬೀಡಿ ಸೇದುತ್ತಾ ಅಂಗಳದಲ್ಲಿ ಕೂತು ಹರಟೆ ಕೊಚ್ಚುವಾಗ ತಾನು ಅಡುಗೆ ಮನೆಯಲ್ಲಿ ಅವಲಕ್ಕಿ ಚಹಾ ತಯಾರಿಕೆ ನಡೆಸುತ್ತಿದ್ದಳು. ಮತ್ತೊಮ್ಮೆ ಬ್ರಹ್ಮಚಾರಿ ವಸಂತನಂತೇಕರಬಾರದು ಎಂದೂ ಅನಿಸುತ್ತಿತ್ತು. ವಸಂತ ಊರಿನ ಪ್ರತಿಯೊಂದು ಯುವಕ ಮಂಡಲಿಯ ಸದಸ್ಯ. ಅವನಿಲ್ಲದೆ ಯಾವ ಮುಖ್ಯ ಸಮಾರಂಭಗಳೂ ನಡೆಯುತ್ತಿರಲಿಲ್ಲ. ಗಂಡು ಗೂಳಿಯ ಹಾಗೆ ಮೆರೆಯುತ್ತಿದ್ದರೆ ಚೆನ್ನಲ್ಲವೇ ಎಂದೂ ಸದಾಶಿವ ಆಲೋಚನೆ ಮಾಡಿದ್ದ.

ಈ ಮಧುರ ಕಲ್ಪನಾಪ್ರಪಂಚದಿಂದ ಸದಾಶಿವನನ್ನು ವಾಸ್ತವಿಕತೆ ಮತ್ತೆ ಮತ್ತೆ ಎಚ್ಚರಿಸುತ್ತಿತ್ತು. ಆಗ ಅವನ ಮನಸ್ಸು ದುಗುಡದಿಂದ ಮುದುಡುತ್ತಿತ್ತು. ಹೌದು, ತಾನೊಬ್ಬ ಗುಲಾಮ- ಸಂಸಾರದ ಸರಪಳಿಗಳಿಗೆ ಸಿಕ್ಕಿ ಹಾಕಿಕೊಂಡವ, ಎಂದು ಮರುಗುತ್ತಿದ್ದ. ತನ್ನ ಬಾಳಿನ ಅತಿ ಸುಂದರ ದಿನಗಳು ಯೌವನದ ದಿನಗಳು— ಉರುಳಿ ಹೋಗುತ್ತಿವೆ; ಬೇರೊಬ್ಬರಿಗಾಗಿ ಜೀವನವನ್ನು ನಡೆಸುವುದರಲ್ಲೇ ಕಾಲ ಕಳೆದುಹೋಗುತ್ತಿದೆಯಲ್ಲ ಎಂಬ ಅನುಚಿತ ಆಲೋಚನೆಗಳು ಸುಳಿದು ಮನಸ್ಸನ್ನು ಕಡೆಯುತ್ತಿದ್ದವು. ಮನೆಗೆ ಹಿಂದಿರುಗಿ ಬರುತ್ತಿರುವಾಗ ಈ ಮಧುರವಾಗೂ ಕಟುವಾದ ಯೋಚನೆಗಳು ಅವನ ಮನಸ್ಸನ್ನು ಕಳವಳಗೊಳಿಸುತ್ತಿದ್ದವು, ಮಲೆನಾಡಿನ ಮೇಲೆ ಬೆಳಕು ನೆಳಲುಗಳು ಎದ್ದೆದ್ದು ಕುಣಿಯುವಂತೆ.

ಒಮ್ಮೆಗೇ ಮಿಂಚಿನಂತೆ ಮನಸ್ಸಿನಲ್ಲಿ ಒಂದು ಭಾವನೆ ಮಿನುಗಿತು. ಅದು ಎಷ್ಟು ಸ್ವಾರ್ಥಪರವಾಗಿತ್ತೆಂದರೆ, ಹೊಳೆದ ಮರು ಗಳಿಗೆಯಲ್ಲೇ ಅದು ತನ್ನಲ್ಲೇ ಮೂಡಿ ಬಂದ ಭಾವನೆ ಎಂದು ಸದಾಶಿವನಿಗೆ ಅನಿಸಲಿಲ್ಲ. ತನ್ನ ಸ್ವಂತ ಸುಖಸಂತೋಷಗಳಿಗೋಸ್ಕರವಾಗಿಯೇ ಆ ಇಪ್ಪತ್ತು ರೂಪಾಯಿಗಳನ್ನು ಖರ್ಚುಮಾಡಿಬಿಡುವುದು! ಒಂದು ರಜಾ ದಿನ ಮುಂಬಯಿಗೆ ಹೋಗಿ, ಯಾವ ಕಟ್ಟುಪಾಡೂ ಇಲ್ಲದೆ, ಮನಬಂದ ಹಾಗೆ ತಿರುಗಿ, ಬಯಸಿದ್ದನ್ನು ತಿಂದು. ಬೇಕಾದ್ದನ್ನು ಕೊಂಡು ಮಜಾ ಉಡಾಯಿಸುವುದು! ಇದುವರೆಗೂ ಬಾಳಿನ ಪ್ರತಿಯೊಂದು ಕ್ಷಣ



ಕೋಟಿನ ಜೇಬಿಗೆ ಕೈ ಹಾಕುತ್ತಿದ್ದರು. ಅಣ್ಣ ಏನಾದರೂ ಪೆಪ್ಪರ್‌ಮೆಂಟನ್ನೋ ಬಿಸ್ಕತ್ತನ್ನೋ ತಂದಿರಬಹುದೆಂದು. ಅವಳ ಕೈಗೆ ಸಿಗದ ಹಾಗೆ ಕೋಟನ್ನು ಮೇಲೆ ತಗುಲಿ ಹಾಕಬೇಕು. ಅಷ್ಟೇ ಅಲ್ಲ, ಇನ್ನೂ ಸಾವಿರ ರೀತಿಯಲ್ಲಿ ಅವನು ಜಾಗರೂಕನಾಗಿರಬೇಕು. ಏಕೆಂದರೆ ಅವನು ಹೇಳಹೊರಟಿರುವ ಸುಳ್ಳಿನ ಸುಳಿವು ಸಕ್ಕೂಗಾಗಲಿ ಆಯಿಗಾಗಲಿ ಸಿಕ್ಕಬಾರದು. ಸದಾಶಿವ ಮನೆ ಹೊಕ್ಕಾಗ ಇದೇ ಯೋಚನೆ ಅವನ ತಲೆಯನ್ನು ತುಂಬಿತ್ತು.

ಸಕ್ಕೂ ಆಗಲೇ ಅವನಿಗಾಗಿ ಕಾದು ನಿಂತಿದ್ದಳು. ಅವನನ್ನು ಕಂಡಕೂಡಲೇ ಅವಳ ಮುಖ ಹರ್ಷದಿಂದ ಅರಳಿತು. ಉತ್ಸಾಹದಿಂದ ಕೂಗಿ ಕೇಳಿದಳು, "ಅಣ್ಣಾ ಪೆನ್ಸಿಲ್ ತರ್ತೀನಿ ಅಂದಿದ್ಯಲ್ಲಾ ತಂದಿದ್ದೀಯಾ? ಹೋಮ್‌ವರ್ಕ್ ಮಾಡೋದಿಕ್ಕೆ ಸುತರಾಂ ಪೆನ್ಸಿಲ್ಲೇ ಇಲ್ಲ!"

ಸದಾಶಿವನ ಮುಖದಲ್ಲಿ ನಗೆ ಮೂಡಿತ್ತು. ಆಫೀಸಿನಿಂದ ಪೆನ್ಸಿಲ್ ತರಲು ಮರೆತಿರಲಿಲ್ಲ. ಅವನ ಕೋಟಿನ ಜೇಬಿನಲ್ಲಿ ಅದು ಭದ್ರವಾಗಿತ್ತು. ಆದರೂ ಅವಳನ್ನು ಕೆಣಕಬೇಕೆನಿಸಿತು. "ಅಯ್ಯೋ. ಮರ್ತೇ ಹೋಯಿತು. ಏನ್ಮಾಡ್ಲೀಗ?" ಎಂದು ಮುಖ ಸೊಟ್ಟಗೆ ಮಾಡಿದ.

ಸಕ್ಕೂಗೆ ಅಣ್ಣನ ಹುಡುಗಾಟ ಹೊಸದೇನೂ ಅಲ್ಲ, "ನಂಗೊತ್ತು, ನೀನ್ಯಾವಾಗ್ಲೂ ಹಾಗೇ ಹೇಳೋದು. ಕೋಟಿನ ಜೇಬು ತೋರಿಸು. ನೀನು ಖಂಡಿತ ತಂದಿದ್ದೀಯಾ. ಓ, ನೋಡಲ್ಲಿ ಕಾಣಿಸ್ತಾ ಇದೆ," ಎಂದು ಅವಳು ಕುಣಿಯುತ್ತಾ ಕೂಗಿದಳು. ಅವನ ಕೋಟು ಹಿಡಿದು ಜಗ್ಗಿ, ಒಳಜೇಬಿನಲ್ಲಿ ಇಣುಕಿ ನೋಡಿದಳು.

ತಂಗಿ ಜೇಬನ್ನು ತಡಕಿದ್ದು ಕಂಡು ಸದಾಶಿವನಿಗೆ ಹೆದರಿಕೆಯಾಯಿತು, ಎಲ್ಲಿ ಪರ್ಸು ಮುಟ್ಟುತ್ತಾಳೋ ಎಂದು, "ಏ, ಸುಮ್ಮನಿರು, ನಾನೇ ಕೊಡ್ತೀನಿ. ಆದ್ರೆ ಮೊದಲು ತಿನ್ನಲು, ತಿಂಡಿ ಏನಾದರೂ ತಾ, ಹಸಿವಾಗ್ತಾ ಇದೆ." ಎಂದ.

ಸಕ್ಕೂ ನಗುತ್ತಾ ಅಡುಗೆಮನೆ ಕಡೆ ಓಡಿದಳು. "ಆಗ್ಲಿ, ಒಂದ್ನಿಮಿಷ ಇರು. ಅಮ್ಮ ಸಕ್ರೆ ಹೋಳಿ ಮಾಡಿದ್ದಾಳೆ. ತರ್ತೇನೆ."

ತಟ್ಟೆಯಲ್ಲಿ ಸಕ್ರೆ ಹೋಳಿ, ಒಂದು ಲೋಟ ನೀರು ತಂದು, ಗೋಡೆಗೆ ಒರಗಿ ಆರಾಮವಾಗಿ ಕೂತಿದ್ದ ಅಣ್ಣನ ಮುಂದಿಟ್ಟಳು.

ಸದಾಶಿವನ ತಾಯಿ ಕೈಯಲ್ಲಿ ಚಾ ಕಪ್ಪನ್ನು ಹಿಡಿದು ಅಡುಗೆ ಮನೆಯಿಂದ ಬಂದರು. ಅದನ್ನು ಅವನ ಮುಂದಿಡುತ್ತಾ ಪ್ರೀತಿಯಿಂದ ಕೇಳಿದರು. "ಏನಪ್ಪಾ ಚಪಾತಿ ಸಾಕಾಯ್ತಾ? ಬೆಳಿಗ್ಗೇನೂ ನೀನು ಸರಿಯಾಗಿ ತಿಂದು ಹೋಗಿರಲಿಲ್ಲ." ಹೀಗೆ ಹೇಳುವುದು ಅವಳಿಗೆ ನಿತ್ಯ ವಾಡಿಕೆ. ಸದಾಶಿವ ಒಮ್ಮೆ ಊಟಕ್ಕೆ ಕೂತರೆ ಹೊಟ್ಟೆ ತುಂಬುವವರೆಗೆ ಏಳುತ್ತಿರಲಿಲ್ಲ. ಅವನ ಜೊತೆಯವರನ್ನು ಊಟದಲ್ಲಿ ಮೀರಿಸುತ್ತಿದ್ದನು. ಇದು ಎಲ್ಲರಿಗೂ ತಿಳಿದ ವಿಷಯ. ಅವನೂ ಎಂದಿನಂತೆ ನುಡಿದ, "ಚಪಾತಿ ಬೇಕಾದಷ್ಟು ಇತ್ತು. ಆಯಿ. ಆದ್ರೆ ಪಲ್ಯ ಇನ್ನು ಸ್ವಲ್ಪ ಹೆಚ್ಚಾಗಿರಬೇಕಾಗಿತ್ತು."

"ಹೌದೋ. ಇನ್ನು ಮೇಲೆ ಹಾಗೇ ಮಾಡ್ತೀನಿ. ಏನು ಮಾಡಲಿ, ನಾಲ್ಕೇ ಆಲೂ ಗಡ್ಡೆ ಇತ್ತು. ಹೆಚ್ಚಿಗೆ ಮಾಡಲು ಆಗಲಿಲ್ಲ." ಎಂದು ತಾಯಿ ಗೊಣಗಿದರು.

ಸದಾಶಿವ ತಿಂಡಿ ತಿಂದಾದ ಮೇಲೆ, ದಿನವೂ ಕೇಳುವ ಹಾಗೆ ಕೇಳಿದರು: "ಏನಪ್ಪಾ ಆಫೀಸಿನ ಸಮಾಚಾರ?" ಸದಾಶಿವನ ಹೃದಯದ ಬಡಿತವೀಗ ಜೋರಾಯಿತು. ಆದರೂ ಶಾಂತನಾಗಿ ಉತ್ತರಿಸಿದ, "ಏನೂ ಇಲ್ಲ ಆಯಿ! ಅಂದ ಹಾಗೆ ಸೇಠಜಿ, ನಾಳೆ ನನ್ನ ಮುಂಬಯಿಗೆ ಹೋಗಿ ಬಾ ಎಂದಿದ್ದಾರೆ. ಏನು ಮಾಡೋದು, ಆಫೀಸಿನ ಕೆಲಸ! ಸೋಮವಾರ ಬೆಳಿಗ್ಗೇನೆ ಬಂದುಬಿಡ್ತೀನಿ!"

ತಾಯಿಗೆ ಆಶ್ಚರ್ಯ. "ಅಲ್ವೋ, ನಾಳೆ ಭಾನುವಾರ ಅಲ್ವೇನೋ. ರಜಾ ದಿನ. ಏನು ಕೆಲಸ ಇರುತ್ತೆ? ನಾಳೆ, ಶ್ರೀಖಂಡ ಪೂರಿ ಮಾಡೋಣ ಅಂದ್ಕೊಂಡಿದ್ದೆ. ನೀನು ಮನೇಲಿರ್ತೀಯಾ ಅಂತ."

ಶ್ರೀಖಂಡ ಪೂರಿ ಅವರ ಮನೆಯಲ್ಲಿ ಅಪರೂಪದ ತಿಂಡಿ. ಅದನ್ನು ಕಂಡರೆ ಸದಾಶಿವನಿಗೆ ಪ್ರಾಣ. ಆದರೆ ಏನು ಮಾಡುವುದು ಶ್ರೀಖಂಡ ಪೂರೀನೂ ಬೇಕು, ಮುಂಬಯಿ ಪ್ರವಾಸವೂ ಆಗಬೇಕು ಅಂದರೆ ನಡೆಯೋದಿಲ್ಲ.

ಅಧೈರ್ಯದಿಂದಲೇ ನುಡಿದ. "ಸೇಠಜಿ ಮಾತು ಅಂದರೆ ಆಯಿತು, ಆಯಿ, ಹೋಗ್ಲೇಬೇಕು. ಸಂಬಳಕ್ಕಿರೋರು, ಗುಲಾಮರು. ದಣಿ ಹೇಳಿದಂತೆ ಕೇಳಿಕೊಂಡಿರಬೇಕು!"

"ಹೌದೋ ಶಿವು, ನಾವೊಂದೆಣಿಸ್ತೀವಿ, ದೇವರೊಂದು ಮಾಡ್ತಾರೆ. ಅವನ ಕೈಲಿ ನಾವೆಲ್ಲ ಸೂತ್ರದ ಬೊಂಬೆಗಳು. ಬ್ರಹ್ಮ ನಮ್ಮ ಹಣೇಲಿ ಬರೆದಿರೋದನ್ನ ತಪ್ಪಿಸೋಕೆ ಆಗುತ್ಯೇ?" ಎಂದು ಮಗ ಹೇಳಿದ್ದಕ್ಕೆ ಹೂಗುಡುತ್ತಾ ಆಯಿ ಅಡುಗೆ ಮನೆಗೆ ಹೋದರು. ಹೀಗೆ ತಾತ್ವಿಕ ಮಾತುಗಳನ್ನು ದಿನಕ್ಕೆ ಮೂರು ನಾಲ್ಕು ಬಾರಿಯಾದರೂ ಆಡದಿದ್ದರೆ ಅವರಿಗೆ ಸಮಾಧಾನವಿಲ್ಲ.

ಸ್ವಲ್ಪ ಹೊತ್ತಿನ ಮೇಲೆ ಸಕ್ಕೂನ ಕರೆದು "ಬಟ್ಟೆ ಬದಲಾಯಿಸಿಕೊಂಡು ಬಾ, ಹೊರಗೆ ಹೋಗಿ ಬರೋಣ" ಎಂದು ಸದಾಶಿವ ತಂಗಿಗೆ ಹೇಳಿದ. ಲಕಡಿ ಫೂಲ್‌ವರೆಗೂ ಅವಳನ್ನು ಕರೆದು ಹೋಗುವ ಎಂದು ಯೋಚಿಸಿದ. ಸಕ್ಕೂಗೆ ಆ ಸೇತುವೆ ಕಂಡರೆ ತುಂಬಾ ಇಷ್ಟ. ಗಂಟೆಗಟ್ಲೆ ಅಲ್ಲಿ ನಿಂತು, ಸುಂದರವಾದ ಪೋಷಾಕುಗಳನ್ನು ಧರಿಸಿ ಸೇತುವೆ ಮೇಲೆ ಓಡಾಡುವ ಜನಗಳನ್ನು ನೋಡುತ್ತಾ ಮೈ ಮರೆಯುತ್ತಿದ್ದಳು. ಜನಗಳ ಗುಜುಗುಜು ಮಾತುಗಳು ವಾಹನಗಳ ಚಕ್ರಗಳ ಗುಡುಗುಡು ಶಬ್ದ, ಕಾರು ಬಸ್ಸುಗಳ ಹಾರ್ನ್ ಕೂಗಾಟ ಅವಳಿಗೆ ಪ್ರಿಯ. ಸದಾಶಿವನಿಗೂ ಆ ಜಾಗವೆಂದರೆ ಪ್ರಿಯ. ಸೇತುವೆ ಕಟ್ಟೆ ಮೇಲೆ ಕೂತು. ಕೆಳಗೆ ಮರಳ ಮೇಲೆ ಜುಳು ಜುಳು ಹರಿಯುವ ಮುಠಾ ನದಿಯ ನೀರಿನ ಗತಿಯನ್ನೇ ಗಮನಿಸುತ್ತಾ ಕಾಲ ಕಳೆಯುವುದೆಂದರೆ ಅವನಿಗೆ ಇಷ್ಟ. ಸಕ್ಕೂ ಶುಭ್ರವಾದ ಲಂಗ ಧರಿಸಿ ನಿಮಿಷದಲ್ಲಿ ಸಿದ್ಧವಾದಳು.

"ಆಯಿ. ನಾವು ಹೀಗೆ ಅಷ್ಟು ದೂರ ಹೋಗಿ ಬರುತ್ತೇವೆ." ಎಂದು ಅಡುಗೆ ಮನೆಯಲ್ಲಿದ್ದ ತಾಯಿಗೆ ಕೂಗಿ ಹೇಳಿ ಇಬ್ಬರೂ ಹೊರ ಹೊರಟರು.

ಸಕ್ಕೂ ಚೂಟಿ ಹುಡುಗಿ. ಜಾಣೆ ಕೂಡ. ಚಿರಪರಿಚಿತವಾದ ಸೇತುವೆ ಮೇಲೆ ಹೋಗುವಾಗ ನೂರೊಂದು ಪ್ರಶ್ನೆಗಳನ್ನು ಕೇಳಿದಳು. ಆದರೆ ಸದಾಶಿವನಿಗೆ ಅವುಗಳ ಕಡೆ ಗಮನವಿಲ್ಲ. ತೋಚಿದ ಉತ್ತರವನ್ನು ಯಾಂತ್ರಿಕವಾಗಿ ಕೊಡುತ್ತಿದ್ದ. ಅವನ ಮನಸ್ಸೆಲ್ಲಾ ಮಾರನೆ ದಿನದ ಮುಂಬಯಿ ಪ್ರವಾಸದ ಮೇಲೇ ಕೇಂದ್ರೀಕೃತವಾಗಿತ್ತು. ಮುಂಬಯಿಯಲ್ಲಿ ಕಾಲ ಹೇಗೆ ಕಳೆಯಬೇಕು; ಇಷ್ಟು ವರ್ಷ ತನ್ನನ್ನು ತಾನೇ ವಂಚಿಸಿಕೊಂಡ ರಸಮಯ ಸುಖಾನುಭವಗಳನ್ನು ಒಂದು ದಿನದಲ್ಲಿ ಹೇಗೆ ತುಂಬಿಕೊಳ್ಳುವುದು ಎಂಬುದರ ಸುತ್ತಲೇ ಅವನ ಮನಸ್ಸು ಚಕ್ರ ಹಾಕುತ್ತಿತ್ತು. ಏನಾದರೂ ಆಗಲಿ, ಎಷ್ಟಾದರೂ ಖರ್ಚಾಗಲಿ. ಒಂದು ಸಲ ಈ ಸಾರಿ "ಡೆಕ್ಕನ್ ಕ್ವೀನ್" ಗಾಡಿಯಲ್ಲೇ ಹೋಗುವೆ. ಎಂದು ತನಗೆ ತಾನೇ ನಾಲ್ಕೈದು ಬಾರಿ ಹೇಳಿಕೊಂಡ. ಕಲ್ಪನಾಲೋಕದಲ್ಲಿ ಅವನಾಗಲೇ ಡೆಕ್ಕನ್ ಕ್ವೀನಿನ ಸುಖಮಯ ಸುಪ್ಪತ್ತಿಗೆಯಲ್ಲಿ ರಾಜನಂತೆ ಕೂತಿದ್ದ! ಸಮವಸ್ತ್ರ ಧರಿಸಿ ತಿಂಡಿ

ತಿನಿಸುಗಳನ್ನು ನೀಡುತ್ತಿದ್ದ ವೇಯಿಟರ್ ಮಾಡಿದ ಸಲಾಮಿಗೆ ಉತ್ತರವಾಗಿ ಬಿಗಿಯಾಗಿ ಕತ್ತನ್ನು ಅಲ್ಲಾಡಿಸಿದ. ಒಳ್ಳೆ ಪಾಷ್ ಹೋಟೇಲಿನಲ್ಲಿ ಪೂರಿ ಹೊಡೆಯುವೆ. ಸಂಜೆ "ತಾಜ್"ನಲ್ಲಿ ಚಹಾ; ನಂತರ ಮೆಟ್ರೋ ಟಾಕೀಸಿಗೆ ಹೋಗಿ ಬಾಲ್ಕೋನಿ ಟಿಕೇಟು ತೆಗೆದು ಇಂಗ್ಲಿಷ್ ಸಿನಿಮಾ ನೋಡುವೆ. ಆ ಮೇಲೆ…ಆಮೇಲೆ… ಇಲ್ಲಿ ಅವನ ಕಲ್ಪನಾ ಬಂಡಿ ತಟಕ್ಕನೆ ನಿಂತಿತು. ಸಂಕೋಚಿತನಾಗಿ ಬೆಳೆದು ಬಂದ ಅವನಿಗೆ ಮುಂದೆ ಆವಿರ್ಭವಿಸುತ್ತಿದ್ದ ಭಾವನೆಗಳಿಗೆ ಭಾಷೆಯ ಮೂರ್ತಸ್ವರೂಪ ಕೊಡಲು ಮನಸ್ಸು ಹಿಂದೇಟು ಹಾಕಿತು. "ಸಾಧ್ಯವಾದರೆ ಬಹುಶಃ" ಎಂದು ಧೈರ್ಯ ತಂದುಕೊಂಡು ಕಲ್ಪನಾವಿಲಾಸವನ್ನು ಮುಂದುವರಿಸಿದ. "ಒಂದು ನಾಚ್ ನೋಡಲು ಹೋಗುವೆ, ಕೇವಲ ಹಾಡು ಕೇಳಲು, ನೃತ್ಯ ನೋಡಲು." ಅವನ ಜೊತೆ ಕೆಲಸಮಾಡುತ್ತಿದ್ದ ಕೆಲವು ಗುಮಾಸ್ತರು ಮುಂಬಯಿ ರಾತ್ರಿ ಜೀವನದ ಬಗ್ಗೆ ಬಡಬಡಿಸುತ್ತಿದ್ದನ್ನು ಅನೇಕ ಬಾರಿ ಕುತೂಹಲದಿಂದ ಆಸಕ್ತಿಯಿಂದ ಕೇಳಿದ್ದ. ಸದಾಶಿವನಿಗೆ ಅದೊಂದು ಅಪರಿಚಿತ ಪ್ರಪಂಚ. ತನಗೂ ಆ ಪ್ರಪಂಚಕ್ಕೂ ಏನೂ ಸಂಬಂಧವಿಲ್ಲ ಎನ್ನುವ ರೀತಿ ನಡೆದುಕೊಂಡಿದ್ದ. ಹಾಗೊಮ್ಮೆಯೇ ಶುಕ್ರವಾರ ಪೇಟೆ ಬೀದಿಯಲ್ಲಿ ಹೋಗುವಾಗಲೆಲ್ಲ ಕುತೂಹಲದಿಂದ ಕೆಂಪು ದೀಪದ ಮನೆಗಳ ಕಡೆ ಕಣ್ಣು ಹಾಯಿಸಿದ್ದ. ಅಲ್ಲಿಂದ ತೂರಿ ಬರುತ್ತಿದ್ದ ಮಾದಕ ಸಂಗೀತ ನೃತ್ಯಗಳ ಝಣ ಝಣ ಶಬ್ದ ಕೇಳಿದ್ದ. ಆಸಕ್ತಿ ಕೆರಳಿದ್ದರೂ ಏಳುತ್ತಿದ್ದ ಭಾವನೆಗಳಿಗೆ ಬಲವಾಗಿ ತಡೆ ಹಾಕಿ ನಿಲ್ಲಿಸಿಕೊಂಡಿದ್ದ. ಹೆಚ್ಚಿನ ಉದ್ರೇಕಕ್ಕೆ ಮನಸ್ಸನ್ನು ಸಡಿಲು ಬಿಟ್ಟಿರಲಿಲ್ಲ. ಈಗ ಅದುಮಿಟ್ಟಿದ್ದ ಭಾವನೆಗಳು ಮೇಲೇಳುವ ಸೂಚನೆ ಕಂಡಾಗ ತನಗೆ ತಾನೇ ನಾಚಿಕೊಂಡ. ಅವನ ಆ ಭಾವನೆಗಳ ಸರಣಿ ಸಕ್ಕೂವಿನ ನಿರಂತರ ಪ್ರಶ್ನೆಗಳಿಂದ ಆಗ ಮುರಿಯಿತು.

ಒಂದು ಸಿನಿಮಾ ಪೋಸ್ಟರನ್ನು ತೋರಿಸುತ್ತಾ ಸಕ್ಕು ಕೇಳುತ್ತಿದ್ದಳು: "ಅಣ್ಣಾ. ಅದು ಯಾವ ಸಿನಿಮಾ ಅಣ್ಣ? ಶನಿವಾರ ಅದಕ್ಕೆ ಹೋಗೋಣವೇನಣ್ಣ?" ಸದಾಶಿವ ಏನೋ ಬೇಕಾಬಿಟ್ಟಿ ಉತ್ತರ ಕೊಟ್ಟು ಅವಳನ್ನು ಅಲ್ಲೇ ಹತ್ತಿರವಿದ್ದ ಘಸೀರಾಮನ ಮಿಠಾಯಿ ಅಂಗಡಿ ಒಳಗೆ ಕರೆದುಕೊಂಡು ಹೋದ.

ಎರಡು ಪ್ಲೇಟ್ ಗುಲಾಬ್ ಜಾಮೂನು ತರಿಸಿದ. ಸಕ್ಕೂ ಸವಿಯುತ್ತಾ ತಿಂದಳು. ಆಸ್ವಾದನೆಯ ಸಂತೋಷದಿಂದ ಅವಳ ಮುಖ ಅರಳಿದುದನ್ನು ಕಂಡು ಸದಾಶಿವನ ಮನಸ್ಸು ಹಗುರವಾಯಿತು. ಅಲ್ಲಿಂದ ಮುಂದೆ ಕಬ್ಬಿನ ಹಾಲಿನ ಅಂಗಡಿಗೆ ಹೋಗಿ ಒಂದೊಂದು ದೊಡ್ಡ ಗ್ಲಾಸ್ ಕಬ್ಬಿನ ರಸ ಇಬ್ಬರೂ ಕುಡಿದರು. ಸಕ್ಕು ತನ್ನ ಪಾಲು ಕುಡಿಯಲು ಪೂರ್ಣ ಹದಿನೈದು ನಿಮಿಷ ತೆಗೆದುಕೊಂಡಳು. ಗ್ಲಾಸಿನಲ್ಲಿ ಉಳಿದ ಮಂಜು ಗಡ್ಡೆಯನ್ನು ನಾಲಿಗೆಯ ಮೇಲಿಟ್ಟುಕೊಂಡು ಅದು ಕರಗಿದ ಮೇಲೆಯೇ ಗ್ಲಾಸನ್ನು ಕೆಳಗಿಟ್ಟಳು. ಅಕ್ಕರೆಯಿಂದ ಅಣ್ಣನ ಕೈ ಹಿಡಿದುಕೊಂಡಳು. ಅಲ್ಲಿಂದ ಅವರು ತಮ್ಮಿಬ್ಬರಿಗೂ ಪ್ರಿಯವಾದ ಲಕಡಿ ಪೂಲಿನ ಮೂಲೆಗೆ ಹೋಗಿ ಕತ್ತಲಾಗುವವರೆಗೂ ಅದೂ ಇದೂ ಹರಟುತ್ತಾ ಕೂತರು. ಸಕ್ಕು ತನ್ನ ಸಂಭಾಷಣೆಯನ್ನು ನಿರಂತರವಾಗಿ ನಡೆಸಿದ್ದಳು. ಕಣ್ಣಿಗೆ ಕಂಡ ಪ್ರತಿಯೊಂದು ವಸ್ತುವಿನ ಬಗೆಗೂ ಪ್ರಶ್ನೆಗಳ ಮಳೆ ಸುರಿಸಿದಳು. ಸದಾಶಿವ ಒಮ್ಮೊಮ್ಮೆ ಉತ್ತರಿಸುತ್ತಿದ್ದ. ಪ್ರತಿ ಮಾತಿಗೆ ನಗೆಯಿಂದಲೇ ಉತ್ತರ ಕೊಟ್ಟಿದ್ದೇ ಹೆಚ್ಚು.

ಮನೆಗೆ ಬಂದಾಗ ಅಡುಗೆ ಸಿದ್ಧವಾಗಿತ್ತು. ಬಂದೇ ಉಸಿರಿನಲ್ಲಿ ಸಕ್ಕು ಗುಲಾಬ್ ಜಾಮೂನ ಕುಂದಾ ಕಬ್ಬಿನ ಹಾಲಿನ ಬಗ್ಗೆ ತಾಯಿಗೆ ಬಡಬಡಿಸಿ ಹೇಳಿದಳು. ಮುದುಕಮ್ಮನಿಗೆ ಇದು ಸಹನವಾಗಲಿಲ್ಲ. ಅತ್ಯಂತ ಅವಶ್ಯಕವಾದ ಪದಾರ್ಥಗಳ ಮೇಲಲ್ಲದೆ. ಬೇರಾವುದಕ್ಕೂ ಒಂದು ಕಾಸು ಖರ್ಚಾದರೂ ಅವರಿಗೆ ಅಸಮಾಧಾನವಾಗುತ್ತಿತ್ತು. ಮಗನನ್ನು ತಕ್ಷಣವೇ ತರಾಟೆಗೆ ತೆಗೆದುಕೊಂಡರು. "ಏನು ಬಂತೋ ನಿನಗೆ ಪಿತ್ತ! ನೀರಿನಂತೆ ದುಡ್ಡು ಖರ್ಚು ಮಾಡೋದಿಕ್ಕೆ? ದುಡ್ಡು ಹಾಳು. ಊಟವೂ ಹಾಳು!" ಎಂದು ಗೊಣಗಿದರು. ಸದಾಶಿವ ಮೆಲ್ಲಗೇ ಪ್ರತಿಭಟಿಸಿದ. "ಈಗೇನಾಯ್ತು! ನಾನೇನು ದಿನಾ ಹಾಗೆ ಖರ್ಚು ಮಾಡ್ತೇನೆಯೇ? ಯಾವಾ-

ಗ್ಲಾದರೂ ಒಂದೊಂದ್ಸಾರಿ ಅಷ್ಟೆ."

ಊಟವಾದ ಮೇಲೆ ಎಂದಿನಂತೆ ಸಕ್ಕು ಅಣ್ಣನಿಗೆ ಪಾಠಗಳನ್ನು ಗಟ್ಟಿಯಾಗಿ ಓದಿ ಒಪ್ಪಿಸಿದಳು. ಸದಾಶಿವನಿಗೆ ಆ ಕಡೆ ಈ ದಿನ ಅಷ್ಟು ಗಮನ ವಿರಲಿಲ್ಲ. ಅಲ್ಲೊಂದು ಇಲ್ಲೊಂದು ತಿದ್ದಿದ, ತಪ್ಪು ಮಾಡಿದ ಕಡೆ ಗದರಿಸಿದ. ಮಲಗುವುದಕ್ಕೆ ಮುಂಚೆ ಸಕ್ಕು ಕೇಳಿದಳು, "ಅಣ್ಣ, ಮುಂಬಯಿಯಿಂದ ನನಗೊಂದು ಜೊತೆ ಬೆಂಡೋಲೆ ತರ್ತೀಯಾ?" ಸದಾಶಿವನೂ ಹಾಗೆಯೇ ಯೋಚಿಸಿದ್ದ ತಾನೆ? "ಏನಂದೆ? ಬೆಂಡೋಲೆಯೇನೆ? ತರ್ತೀನಿ. ನಿನಗೆ ಯಾವ ಬಣ್ಣದ್ದು ಇಷ್ಟ?" ಎಂದು ಕೇಳಿದ. "ಯಾವುದಾದರೂ ಸರಿ, ಅಣ್ಣ," ಎಂದು ಅಂದು ಆ ಮೇಲೆ ಕ್ಷಣ ಯೋಚಿಸಿ, "ಕೆಂಪು ವಜ್ರದ್ದು ತಗೊಂಡು ಬಾ. ನನಗೇ ಅದೇ ಇಷ್ಟ," ಎಂದು ಅಣ್ಣನ ಮುಖವನ್ನೇ ನೋಡುತ್ತಾ ಕೇಳಿದಳು. "ವಜ್ರದ್ದು?" ಸದಾಶಿವ ತನಗೆ ತಾನೆ ನಕ್ಕ. "ಹೊಳೆಯುವ ಗಾಜಿನ ತುಂಡುಗಳೆಲ್ಲಾ ಇವಳಿಗೆ ವಜ್ರ!" ಎಂದುಕೊಂಡು ಸುಮ್ಮನಾದ.

ರಾತ್ರಿ ದೀಪ ಆರಿಸುವ ಮುನ್ನ ಅವನ ತಾಯಿ ಬಂದು ಮತ್ತೊಮ್ಮೆ ಕೇಳಿದಳು, "ಏನೋ ಶಿವು, ನಾಳೆ ಹೊರಡೋದು ಖಂಡಿತ ತಾನೆ?"

"ಹೌದು, ಆಯಿ, ಬೆಳಗ್ಗೇನು ತಿಂಡಿ ಮಾಡ್ತೀಯಾ?"

"ನೋಡೋಣ, ಏನಾದ್ರು ಮಾಡಿದರಾಯ್ತು."

ಬಹಳ ಹೊತ್ತು ಸದಾಶಿವನಿಗೆ ನಿದ್ದೆ ಹತ್ತಲಿಲ್ಲ. ಮುಂಬಯಿಯಲ್ಲಿ ತಾನು ಅನುಭವಿಸಬಹುದಾದ ಕಲಾಪಗಳ ಪ್ರತಿಯೊಂದು ಸೂಕ್ಷ್ಮ ವಿವರವೂ ಅವನ ಕಣ್ಣ ಮುಂದೆ ಚಿತ್ರಪಟದಂತೆ ಹಾದು ಹೋದುವು. ಆ ದೃಶ್ಯದಲ್ಲಿ ಹಗಲು–ಗನಸುಗಳು ಮೋಹಕತೆ ತುಂಬಿತ್ತು. ವಾಸ್ತವಿಕತೆಗಿಲ್ಲದ ಮೆರಗು ಅವಕ್ಕಿತ್ತು. ಕನಸು ಕಾಣುತ್ತಾ ಸದಾಶಿವ ನಿದ್ದೆ ಹೋದ.

ಬೆಳಿಗ್ಗೆ ಎದ್ದಾಗ ಇನ್ನೂ ಕತ್ತಲು ಕತ್ತಲಾಗಿತ್ತು. ಎಚ್ಚರವಾದ ಮೇಲೂ ಹಾಸಿಗೆಯ ಮೇಲೆ ಒಂದು ಗಂಟೆ ಮಲಗಿಕೊಂಡೇ ಅಡುಗೆ ಮನೆಯಿಂದ, ಹೊರಗಿಂದ ಮೆಲ್ಲಗೆ ಏರಿ ಬರುವ ವೈವಿಧ್ಯವಾದ ಶಬ್ದಗಳನ್ನು ಕೇಳುತ್ತಾ ಹಾಗೇ ಬಿದ್ದುಕೊಂಡಿರುವುದು ಅವನ ವಾಡಿಕೆ. ಆ ಸದ್ದು ಹೆಚ್ಚಾಗಿ ತನ್ನ ಪ್ರತ್ಯೇಕತೆಯನ್ನು ಕಳೆದುಕೊಂಡು ಹಗಲಿನ ಸುತ್ತ ಹಬ್ಬಿದ ಮತ್ತೊಂದು ವಾತಾವರಣದಂತೆ ಮಿಶ್ರವಾಗಿ ಹೋಗುವವರೆಗೆ ಅವನು ಹಾಸಿಗೆ ಬಿಟ್ಟೇಳುತ್ತಿರಲಿಲ್ಲ. ಆದರೆ ಇಂದು ಎಚ್ಚರವಾದ ಮೇಲೆ ಹಾಸಿಗೆ ಮೇಲೆ ಹತ್ತು ನಿಮಿಷಕ್ಕೂ ಹೆಚು ಇರಲು ಆಗಲಿಲ್ಲ. ಅತ್ತಿತ್ತ ಹೊರಳಾಡಿ, ಕೊನೆಗೆ ಸೋಮಾರಿತನವನ್ನು ಕೊಡವಿ, ಚಂಡಿನಂತೆ ಪುಟಿದೆದ್ದ, ನೇರ ಅಡುಗೆ ಮನೆ ಕಡೆ ಧಾವಿಸಿ, ತಾಯಿಯನ್ನು ಎಬ್ಬಿಸಿದ.

ಹಾಗೂ ಹೀಗೂ ಸದಾಶಿವ ಮನೆಗೆ ಬಿಟ್ಟಾಗ ಆಗ ತಾನೆ ಏಳು ಹೊಡೆದಿತ್ತು. ತಿಂಡಿ ತಿಂದು ಒಂದು ಸಣ್ಣ ಬುತ್ತಿಗಂಟು ಕಟ್ಟಿಸಿದ್ದ. ಸಕ್ಕೂಗೆ ಇನ್ನೂ ಎಚ್ಚರವಾಗಿರಲಿಲ್ಲ. ನಿದ್ದೆಯಲ್ಲಿದ್ದ ಅವಳ ಮುಗ್ಧ ಎಳೆಯ ಮುಖ ಕಂಡು ಅವನ ಪ್ರೇಮ ತುಂಬಿ ಬಂತು. ಅವಳು ಕೇಳಿದ ಬೆಂಡೋಲೆಯ ನೆನಪು ಬಂತು. "ಅವಳಿಗೆ ಸುಂದರವಾದ ಒಂದು ಜೊತೆ ತರಬೇಕು," ಎಂದುಕೊಂಡ.

ಸ್ಟೇಷನ್ನಿಗೆ ಬರುವ ವೇಳೆಗೆ ಡೆಕ್ಕನ್ ಕ್ವೀನ್ ಪ್ಲಾಟ್‌ಫಾರಂಗೆ ಬಂದು ನಿಂತಿತ್ತು. ಸೀಟಿಗೋಸ್ಕರ ಬರುವನೇ [illegible] ಟಿಕೆಟ್ ಪಡೆಯಲು ಅವನು ಅನೇಕ ಬಾರಿ ಕೌಂಟರಿಗೆ ಬಂದಿದ್ದ ನೆನಪಿದೆ. ಆದರಿಂದು ತನಗಾಗೇ ಟಿಕೆಟ್ ಪಡೆಯಲು ಹೋದಾಗ ಏನೋ ಹೆಮ್ಮೆಯಾಗುತ್ತಿತ್ತು. ಹತ್ತು ರೂಪಾಯಿ ನೋಟೊಂದನ್ನು ಕೌಂಟರಿನ ಮೇಲಿಡುತ್ತಾ, "ಪೂನಾಗೆ ಒಂದು ಟಿಕೆಟ್ ಕೊಡಿ," ಎಂದು ಕೇಳಿದನು.

"ಟಿಕೆಟ್ ಇಲ್ಲ; ಎಲ್ಲಾ ರಿಸರ್ವಾಗಿದೆ." ಬುಕಿಂಗ್ ಗುಮಾಸ್ತೆಯ ಧ್ವನಿ ಗಡುಸಾಗಿತ್ತು.

"ಏನೆಂದ್ರಿ, ಟಿಕೆಟ್ ಇಲ್ಲವೆ? ಎಲ್ಲಾ ರಿಸರ್ವ್ ಆದರೆ ಹೇಗೆ ಸಾಧ್ಯ? ನೋಡಿ ಹೇಳಿ. ಒಂದು ಟಿಕೆಟ್," ಸದಾಶಿವ ದೈನ್ಯದಿಂದ ನುಡಿದ.

"ಅಪ್ಪಂದ್ರೆ ಇಲ್ಲ." ಗುಮಾಸ್ತನ ಕಂಠ ಕಟುವಾಗಿತ್ತು.

"ಸ್ವಲ್ಪ ನೋಡಿ. ದಯವಿಟ್ಟು," ಸದಾಶಿವ ಅಷ್ಟಕ್ಕೇ ಬಿಡಲಿಲ್ಲ. "ಹೋಗ್ರೀ. ಏನಂತ ತಿಳ್ಕೊಂಡಿದ್ದೀರಿ. ಇದೇನು ಚುರುಮುರಿ ಅಂಗಡಿಯೇ ಚೌಕಾಶಿ ಮಾಡಲು?" ಗುಮಾಸ್ತ ನಗುತ್ತಾ ಗೇಲಿ

ಮಾಡಿದ. ಮಿಕ್ಕ ಗುಮಾಸ್ತರು ಕೇಕೆ ಹಾಕಿದರು. ಸದಾಶಿವನಿಗೆ ಅವಮಾನವಾದಂತಾಯಿತು. ರೇಲ್ವೆ ಗುಮಾಸ್ತರ ವಂಶವನ್ನೇ ಶಪಿಸುತ್ತಾ ಅಲ್ಲಿಂದ ಕಾಲು ಕಿತ್ತನು.

ಈಗ ಬೇರೆ ದಾರಿಯೇ ಇರಲಿಲ್ಲ. ಮೇಲ್ ಗಾಡಿಯೇ ಗತಿಯಾಯಿತು. ಇದು ಮುಂಬಯಿ ತಲುಪುವಾಗ ಮಧ್ಯಾಹ್ನ ೧೨ ಗಂಟೆ ಆಗಿಬಿಡುತ್ತದೆ. ಪ್ರಯಾಣದಲ್ಲೇ ಅರ್ಧ ದಿನ ಕಳೆದು ಹೋಗುತ್ತದೆ. "ಇದೆಲ್ಲಾ ಹಣೆ ಬರಹ. ಸುಖಪಡುವುದಕ್ಕೆ ನಾನು ಹುಟ್ಟಿಲ್ಲ." ಎಂದು ಗೊಣಗಿಕೊಂಡೇ ಸದಾಶಿವ ಮೂರನೇ ದರ್ಜೆ ಟಿಕೆಟ್ ಕೌಂಟರಿಗೆ ನಡೆದ.

ಅಲ್ಲಿ ಜನದ ಉದ್ದನೇ ಸಾಲು ನಿಂತಿತ್ತು. ಅವ ಸರಿದು ಹೋಗಿ ಸಾಲಿನ ಕೊನೆಯಲ್ಲಿ ನಿಂತು ತನ್ನ ಸರದಿಗಾಗಿ ಕಾಯತೊಡಗಿದ. ಸ್ಟೇಷನ್ನಿನಿಂದ ಡೆಕ್ಕನ್ ಕ್ವೀನ್ ಹೊರಡುವ ಸದ್ದು ಕೇಳಿಸಿತು. ಅದರ ಇಂಜಿನ್ನಿನ ಸೀಟಿ ಸದಾಶಿವನ ಕಿವಿಗಳನ್ನು ಛೇದಿಸಿಕೊಂಡು ಹೋಯಿತು.

ಅವನಿಗೆ ಟಿಕೆಟ್ಟು ಸಿಕ್ಕು ಪ್ಲಾಟ್‌ಫಾರಂಗೆ ಬಂದಾಗ ಗಾಡಿ ಇನ್ನೂ ಬಂದಿರಲಿಲ್ಲ. ಬರಲು ಇನ್ನೂ ಅರ್ಧ ಗಂಟೆ ಸಮಯ ಇತ್ತು. ಕಾಲ ಹೇಗೆ ಕಳೆಯುವುದು? ಹೊಟ್ಟೆಗೇನಾದರೂ ಹಾಕಿಕೊಳ್ಳೋಣವೆಂದು ದಿವಾಡಕರ ಅವರ ಚಹಾ ಅಂಗಡಿಗೆ ಹೋದ. ಮನೆಯಲ್ಲಿ ತಿಂದಿದ್ದ ತಿಂಡಿ ಇನ್ನೂ ಹೊಟ್ಟೆಯಲ್ಲೇ ಕೂತಿತ್ತು. ಹಸಿವೆ ಅನಿಸಿರಲಿಲ್ಲ. ಆದರೂ ಬಜ್ಜಿ ಚಹಾ ತರಲು ಹೇಳಿದ. ಬಜ್ಜಿ ಬಿಸಿ ಬಿಸಿಯಾಗಿ ರುಚಿಯಾಗಿತ್ತು. ಚಹಾ ಆಪ್ಯಾಯಮಾನವಾಗಿತ್ತು. ಅವನ ಮನಸ್ಸನ್ನು ಕವಿದಿದ್ದ ಮುಜುಗರದ ಮೋಡ ಸರಿದು ಉಲ್ಲಾಸದ ಪ್ರಕಾಶ ಮತ್ತೆ ಮೂಡಿತು.

ಚಹಾ ಕುಡಿದು ಮುಗಿಸುತ್ತಿದ್ದ ಹಾಗೆಯೇ ಗಾಡಿ ಕೂಗುತ್ತಾ ಬಂತು. ಅವಸರದಲ್ಲಿ ಬಿಲ್ಲು ಪಾವತಿ ಮಾಡಿ, ಬೋಗಿಯೊಂದರ ಕಡೆ ನುಗ್ಗಿದ. ದೃಢಕಾಯನಾಗಿ ಬೆಳೆದಿದ್ದರಿಂದ. ತನ್ನಂತೇ ಮುನ್ನುಗ್ಗುತ್ತಿದ್ದ ಮೂರು ನಾಲ್ಕು ಮಂದಿಯನ್ನು ಬದಿಗೆ ತಳ್ಳಿ, ಗಾಡಿಯೊಳಕ್ಕೆ ನುಗ್ಗಿ, ಜಾಗ ಹಿಡಿದ

ಕಿಟಕಿಯ ಪಕ್ಕವೇ ಜಾಗ ಸಿಕ್ಕಿದ್ದು ಅವನಿಗೆ ಸಂತೋಷವಾಯ್ತು. ಕುಳಿತ ಸ್ಥಳದಿಂದಲೇ ಹೊರಗಿನ ದೃಶ್ಯಗಳನ್ನು ನೋಡಲು ಅನುಕೂಲವಾಯಿತು. ಅವರೇನು ಪ್ರಕೃತಿ ಸೌಂದರ್ಯದ ಆರಾಧಕನಲ್ಲ, ಆದರೆ ಗಾಡಿ ಚಲಿಸುವಾಗ ಕಿಟಕಿಯಿಂದ ಹೊರಗೆ ನೋಡುವುದೆಂದರೆ ಅವನಿಗೇನೋ ಅದೊಂದು ತರಹದ ಸಂತಸ. ಪ್ರತಿ ದಿನ ಕಾಣುವ ಬೇಸರ ತರುವ ಒಂದೇ ರೀತಿಯ ದೃಶ್ಯಗಳಿಗೂ, ಕಿಟಕಿಯಿಂದ ಕಾಣುವ, ಪ್ರತಿಕ್ಷಣ ಬದಲಾಯಿಸುವ ಮನೋಹರವಾದ ದೃಶ್ಯಗಳಿಗೂ ಅದೆಷ್ಟು ಅಂತರ!

ಗಾಡಿ ದಾದರಿಗೆ ಬಂದಾಗ ಮಟಮಟ ಮಧ್ಯಾಹ್ನ, ತಡೆಯಲಾರದಷ್ಟು ಸೆಕೆ. ತೊಟ್ಟಿದ್ದ ಉಣ್ಣೆ ಕೋಟನ್ನು ಬಿಚ್ಚಿ ಬಿಡಬೇಕು ಅನಿಸಿತು. ಆದರೆ ಉಣ್ಣೆ ಸೂಟು ಧರಿಸಿ ಓಡಾಡುತ್ತಿದ್ದ ಅನೇಕರನ್ನು ಕಂಡು ಸುಮ್ಮನಾದ. ಸೇತುವೆ ಹತ್ತಿ ಸ್ಟೇಷನ್ ದಾಟಿಕೊಂಡು ಆ ಉಪನಗರದ ಇನ್ನೊಂದು ಬದಿಗೆ ಹೋದನು. ಎಲ್ಲಿಗೆ ಹೋಗಬೇಕೆಂಬ ಪ್ರಶ್ನೆ ಇನ್ನೂ ಇತ್ಯರ್ಥವಾಗಿರಲಿಲ್ಲ. ಹಿಂದೆ ಮುಂಬಯಿಗೆ ಬಂದಾಗಲೆಲ್ಲಾ ಗಿರ್‌ಗಾಂವಿನಲ್ಲಿದ್ದ ನೆಂಟರ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದ. ಈ ದಿನ ಅದಾಗದು! ಯಾವುದಾದರೊಂದು ವಸತಿ ಗೃಹಕ್ಕೆ ಹೋಗುವುದು ಎಂದುಕೊಂಡ.

ಹಾಗೇ ನೋಡುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಪರಿಚಿತವಾದ ಮುಖವೊಂದು ಕಂಡಿತು. ನೋಡಿದೊಡನೆಯೆ ಎದೆ ಧಸಕ್ಕೆಂದಿತು.

"ಇವನ್ಯಾಕೆ ಕಣ್ಣಿಗೆ ಬಿದ್ದ ಈಗ? ಅವನೇನಾದರೂ ನನ್ನ ನೋಡಿಬಿಟ್ಟರೆ ನನ್ನ ಪ್ಲ್ಯಾನೆಲ್ಲ ತಲೆ ಕೆಳಗು! ಅವನು ಖಂಡಿತ ನನ್ನ ಬಿಡೋಲ್ಲ, ಜಿಗಣೆ ಹಿಡಿದಾಗೆ ಹಿಡಿದ್ಬಿಡ್ತಾನೆ!" ಎಂದು ಕಸಿವಿಸಿಯಾದ. ಅವನಿಂದ ತಪ್ಪಿಸಿಕೊಳ್ಳಲು, ದೃಷ್ಟಿ ತಪ್ಪಿಸಿ ಬೇರೆ ಕಡೆ ಹೊರಟಾಗಲು ನೋಡಿದ. ಆದರೆ ಅಷ್ಟರಲ್ಲೇ ಗೆಳೆಯ ಇವನನ್ನು ನೋಡಿ ಬಿಟ್ಟಿದ್ದನು. ಓಡಿ ಬಂದವನೇ ಬೆನ್ನ ಮೇಲೆ ಜೋರಾಗಿ ಕೈ ಚಪ್ಪರಿಸಿದ.

"ಏನೋ ಇಲ್ಲಿ? ಎಷ್ಟು ವರ್ಷ ಆಯಿತೋ ನಿನ್ನನ್ನು ನೋಡಿ? ನಡಿ, ಈ ಸಲ ನೀನು ನನ್ನಿಂದ ತಪ್ಪಿಸಿಕೊಳ್ಳುವ ಹಾಗಿಲ್ಲ, ಹೋದ ಸಲ ಬಂದಾಗಲೂ ಏನೇನೋ ಸಬೂಬು ಹೇಳಿ ತಪ್ಪಿಸಿಕೊಂಡೆ. ಮನೆಗೆ ಬರಲಿಲ್ಲ. ಈ ಸಲ ನಿನ್ನನ್ನು ಎಳೆದುಕೊಂಡು ಹೋಗುತ್ತೇನೆ. ಹೇಳೀಗ ಅಯಿ ಹೇಗಿದ್ದಾರೆ? ಸಕ್ಕೂ ಹೇಗಿದ್ದಾಳೆ? ಅವಳೀಗ ಬೆಳೆದು ದೊಡ್ಡವಳಾಗಿರಬೇಕು!" ಗೆಳೆಯ ಭಾಸ್ಕರ ಬಡಬಡಿಸಿದ.

ಭಾಸ್ಕರ ಚಿಕ್ಕಂದಿನಿಂದಲೂ ಸದಾಶಿವನ ಜೊತೆ ಆಡಿ ಬೆಳೆದವನು. ಜೊತೆಯಲ್ಲೇ ಓದಿದವನು. ಎಷ್ಟು ಬಾಯಿ ಬಡುಕನೋ, ಅಷ್ಟೇ ನಿಷ್ಠಾವಂತ ಗೆಳೆಯ. ವಿಮಾ ಕಂಪನಿಯಲ್ಲಿ ಗುಮಾಸ್ತನಾಗಿದ್ದ. ಅವನ ಆದರದ ಸ್ವಾಗತಕ್ಕೆ ಸದಾಶಿವನ ಮನುಸ್ಸು ಮೆತ್ತಗಾಯಿತು. ತನ್ನ ಕಲ್ಪನಾಲೋಕ ಮುರಿದು ಬಿದ್ದು ಮನಸ್ಸಿಗೆ ನಿರಾಶೆಯಾದರೂ ಗೆಳೆಯನ ಕರೆಗೆ ವಿಶ್ವಾಸದ ಮುಗುಳ್ನಗೆಯ ಪ್ರತ್ಯುತ್ತರ ಕೊಡಲಾಗದೆ ಇರಲಿಲ್ಲ.

"ಅರೆ ಭಾಸ್ಕರ, ನೀನು ಸಿಗುತ್ತಿ ಎಂದು ನಾನು ಅಂದುಕೊಂಡಿರಲೇ ಇಲ್ಲ! ಅಯಿ, ಸಕ್ಕೂ ಇಬ್ಬರೂ ಚೆನ್ನಾಗಿದ್ದಾರೆ. ನೋಡು. ನಾನೀಗ ಕೆಲಸದ ಮೇಲೆ ಬಂದಿದ್ದೇನೆ. ಗಿರ್‌ಗಾಂವಿಗೆ ಹೋಗುತ್ತಿದ್ದೇನೆ. ನಿನಗೇ ಗೊತ್ತಲ್ಲ. ಅಲ್ಲಿ ನನ್ನ ಸಂಬಂಧಿಗಳಿದ್ದಾರೆ ಅಂತ."

ಭಾಸ್ಕರ ಇದಕ್ಕೆ ಅಷ್ಟು ಸುಲಭವಾಗಿ ಬಿಟ್ಟುಕೊಡುವ ಮನುಷ್ಯನಲ್ಲ.

"ನೋಡು! ಇವೆಲ್ಲಾ ಇನ್ನಾವಾಗಲಾದರೂ ಹೇಳುವಿಯಂತೆ. ನಿನ್ನ ಸಂಬಂಧಿಗಳ ವಿಷಯ ನನಗೆ ಗೊತ್ತು. ಅವರು ನೀನು ಬರಲಿಲ್ಲವಲ್ಲಾ ಎಂದು ನೊಂದುಕೊಳ್ಳುವರಲ್ಲ. ಈಗ ನನ್ನ ಜೊತೆ ಬಂದ್ಬಿಡು!"

ಸದಾಶಿವನಿಗೆ ಏನು ಹೇಳಲೂ ತೋಚಲಿಲ್ಲ.

ಭಾಸ್ಕರ ತುಸು ನಾಚಿಕೊಂಡೇ ಅಂದ. ನಿನಗೂ ತಿಳಿದಿರಬೇಕಲ್ಲವೆ? ನಾನೀಗ ಸಂಸಾರ ಹೂಡಿದ್ದೇನೆ. ಖಂಡಿತ ನೀನು ಮನೆಗೆ ಬರ್ಲೇಬೇಕು."

ಸದಾಶಿವನಿಗೆ ಈಗಂತೂ ನಕಾರ ಹೇಳಲು ಸಾಧ್ಯವಿರಲಿಲ್ಲ. ಶಾಲೆಯಲ್ಲಿದ್ದಾಗ ಅವರಿಬ್ಬರೂ ಆತ್ಮೀಯ ಗೆಳೆಯರಾಗಿದ್ದರು. ಆಮೇಲೂ ವರ್ಷಕ್ಕೊಮ್ಮೆಯಾದರೂ ಭೆಟ್ಟಿಯಾಗುತ್ತಿದ್ದರು. ಭಾಸ್ಕರ ಅವನ ಗೆಳೆಯರಲ್ಲೆಲ್ಲ ಖುಷಿ ಹುಡುಗ













# ತಲೆಗೆ ತಾಗಿತೋ ತಲೆ
# ಹೇನುಗಳಿಗೆ ದೊರೆಯಿತು ಹೊಸನೆಲೆ !

ಶಾಲೆಯೇ ಇರಲಿ, ಮನೆ ಅಥವಾ ತೋಟವೇ ಇರಲಿ,
ಹೇನುಗಳಿಗೆ ಹರಡಲು ಅಲ್ಲಿ ಅವಕಾಶ ಸಿಗುತ್ತದೆ.

ಲಾಯಿಸಿಲ್ ಆಲ್ಕೊಹಾಲ್ ರಹಿತವಾಗಿದೆ.

ಇತರ ಹೇನಿನ ಔಷಧಿಗಳಂತೆ ಲಾಯಿಸಿಲ್ ಆವಿಯಾಗುವುದಿಲ್ಲ. ಇದು ನಿಮ್ಮ ನೆತ್ತಿ ಮತ್ತು ಕೂದಲಿನಿಂದ ತೇವ ಮತ್ತು ಅತ್ಯಾವಶ್ಯಕವಾದ ಪೋಷಕ ಎಣ್ಣೆಗಳನ್ನು ತೆಗೆಯುವುದಿಲ್ಲ. ತಲೆಗೂದಲನ್ನು ಒಣಕಲಾಗಿ ಅಥವಾ ಬಿರುಸಾಗಿ ಮಾಡಿ ತಲೆಹೊಟ್ಟು ಉಂಟು ಮಾಡುವುದಿಲ್ಲ.

ಲಾಯಿಸಿಲ್ ಆಯುರ್ವೇದಿಕವಾಗಿದೆ ಮತ್ತು ಎಣ್ಣೆಯಿಂದ ತಯಾರಿಸಲ್ಪಟ್ಟಿದೆ.

ಮೋಹಕವಾದ ಸುಗಂಧವಿರುವ ಲಾಯಿಸಿಲ್ ಆಯುರ್ವೇದಿಕ ಎಣ್ಣೆಯ ಮೇಲೆ ಆಧಾರಿತವಾಗಿದೆ. ಅದು ಹೇನು ಮತ್ತು ಸೀರುಗಳನ್ನು ಕೊಲ್ಲುವುದು ಮಾತ್ರವಲ್ಲದೆ ನೆತ್ತಿಯ ಕೂದಲಿನ ಪೋಷಣೆ ಮಾಡುತ್ತದೆ ಮತ್ತು ತಲೆಹೊಟ್ಟು ಉಂಟಾಗದಂತೆ ತಡೆಯುತ್ತದೆ.

ಹೆಚ್ಚೆಚ್ಚು ಡಾಕ್ಟರರು ಲಾಯಿಸಿಲ್ ಉಪಯೋಗಿಸಲು ಸಲಹೆ ನೀಡುತ್ತಾರೆ.




ಶೀಘ್ರ
ಸುರಕ್ಷಿತ ಮತ್ತು ನಿಶ್ಚಿತ

ಪರಿಣಾಮಕಾರಿಯಾದ, ಆಲ್ಕೊಹಾಲ್
ರಹಿತ ಆಯುರ್ವೇದಿಕ ಎಣ್ಣೆಯಿಂದ
ತಯಾರಿಸಲ್ಪಟ್ಟಿದ ಹೇನು-ನಾಶಕ

ಸುಜಾನಿಲ್ಸ್
## ಲಾಯಿಸಿಲ್
ಹೇನು ನಾಶಕ ಸುಗಂಧದ ಎಣ್ಣೆ



**ಸುಜಾನಿಲ್ ಕೆಮೊ ಇಂಡಸ್ಟ್ರೀಸ್**
ಗಣೇಶ್ ನಗರ್, ಚಿಂಚವಾಡ್, ಪುಣೆ-411 033

ಮುಂದಿಡುತ್ತಾ, ಗಂಡನ ಮಿತ್ರ ಯಾರು ಎಂದು ನೋಡಿದಳು. ಸದಾಶಿವನೂ ಕತ್ತೆತ್ತಿ ಅವಳನ್ನು ನೋಡಿದನು. ಮುಖ ಪರಿಚಿತವಾಗಿದ್ದ ಹಾಗೆ ಅನಿಸಿತು. ಆದರೆ ಯಾರು, ಎಲ್ಲಿ ನೋಡಿದ್ದು ಎಂದು ತಿಳಿಯಲಿಲ್ಲ. ಅವಳು ಪುಣೆ ಹುಡುಗಿ ಎಂದು ಭಾಸ್ಕರ ಹೇಳಿರಲಿಲ್ಲವೆ? ಅಲ್ಲೆಲ್ಲೋ ಅವಳನ್ನು ಕಂಡಿದ್ದಿರಬಹುದು ಎಂದುಕೊಂಡ. ಆದರೆ ಹೆಂಗಸರಿಗೆ ಮುಖಗಳ ನೆನಪು ಚೆನ್ನಾಗಿರುತ್ತದೆಯಲ್ಲವೆ? ಕಮಲ ಸದಾಶಿವನನ್ನು ತಕ್ಷಣ ಗುರುತು ಹಿಡಿದಳು. ಮೊದಲ ನೋಟದಲ್ಲಿದ್ದ ಹೊಸಬನೆಂಬ ನಾಚಿಕೆ ಮಾಯವಾಯಿತು. ಚೇಷ್ಟೆ ಧ್ವನಿಯಲ್ಲಿ ಎಂದಳು, "ಸದಾಶಿವಣ್ಣ ನನ್ನನ್ನು ಮರೆತ ಹಾಗೆ ಕಾಣುತ್ತೆ!"

ಸದಾಶಿವ ಮತ್ತೊಮ್ಮೆ ಅವಳ ಮುಖ ನೋಡಿದ, ಗುರುತುಹತ್ತಿತು. ಪರಸ್ಪರ ಪರಿಚಯದ ನಗೆ ವಿನಿಮಯವಾಯಿತು. ಸುಮಾರು ಹತ್ತು ವರ್ಷಗಳ ಹಿಂದೆ ಸದಾಶಿವನ ತಂದೆ ಬದುಕಿದ್ದಾಗ ಘಾರಪುರೆಯವರು ನೆರಮನೆಯಲ್ಲೇ ಇದ್ದರು. ಕಮಲ ಆಗಿನ್ನೂ ಪುಟ್ಟ ಹುಡುಗಿ. ಸದಾಶಿವನ ತಾಯಿ ಅವಳಿಗೆ ಸಿಹಿ ತಿಂಡಿ ಕೊಟ್ಟು ಮುದ್ದುಮಾಡುತ್ತಿದ್ದರಿಂದ ಅವರ ಮನೆಗೆ ಪದೇ ಪದೇ ಬರುತ್ತಿದ್ದಳು. ಆಮೇಲೆ ಘಾರಪುರೆಯವರಿಗೆ ವರ್ಗವಾಗಿತ್ತು. ಸದಾಶಿವ ಮತ್ತೆ ಅವರನ್ನು ಕಂಡಿರಲಿಲ್ಲ.

"ಹೌದು, ಹೌದು ಈಗ ನೆನಪು ಬಂತು. ಘಾರಪುರೆಯವರ ಮಗಳಲ್ಲವೆ?"

"ಓಹೋ, ನಿಮ್ಮಿಬ್ಬರಿಗೂ ಮೊದಲೇ ಪರಿಚಯ ಇದ್ದ ಹಾಗಾಯಿತಲ್ಲಾ," ಎಂದು ಭಾಸ್ಕರ ತನಗಾದ ಸಂತೋಷ ಮುಚ್ಚಿಡದೆ ನುಡಿದ.

ಪರಿಚಯ ಹೇಗೆ ಎಂದು ಭಾಸ್ಕರ ವಿವರಣೆ ಕೊಟ್ಟ ಮೇಲೆ ಅವನಿಗೆ ಇನ್ನೂ ಸಂತೋಷವಾಯಿತು.

ಒಮ್ಮೆ ಬಂದವರು ಯಾರೆಂದು ತಿಳಿಯಿತೋ ಇಲ್ಲವೋ, ಕಮಲ ಬಂದಿದ್ದ ಅತಿಥಿಯೊಂದಿಗೆ ಸಂಕೋಚಬಿಟ್ಟು ಆದರದಿಂದ ಮಾತನಾಡತೊಡಗಿದಳು. ಅವಳು ಪುಣೆ ಬಿಟ್ಟು ಸೊಲ್ಲಾಪುರಕ್ಕೆ ಹೊರಟಾಗ ಸಕ್ಕೂ ಇನ್ನೂ ಕೈಮಗು. [illegible]

ಕೊಂಡಳು.

"ಆಯಿ ಮಾಡುತ್ತಿದ್ದ ಚಿಕ್ಕಿ ಎಷ್ಟು ರುಚಿಯಾಗಿರುತ್ತಿತ್ತು! ನಿಮ್ಮನೆಗೇ ಬಂದಾಗೆಲ್ಲಾ ನನಗೊಂದು ಚೂರು ಕೊಟ್ಟೇ ಕೊಡುತ್ತಿದ್ದರು. ನಾನು ಅವರನ್ನು ತುಂಬಾ ಪೀಡಿಸುತ್ತೇನೆಂದು ಕಾಣುತ್ತೆ," ಸದಾಶಿವನ ತಾಯಿಯ ಜೊತೆ ತಾನು ಮಾಡಿದ ತುಂಟಾಟಗಳನ್ನು ನೆನೆಸಿಕೊಳ್ಳುತ್ತ ಕಮಲ ಅಂದಳು.

"ಹಾಗೆನಿಲ್ಲ," ಸದಾಶಿವ ಅಂದ, "ಆಯಿ ಈಗಲೂ ನಿನ್ನನ್ನು ನೆನೆಸಿಕೊಳ್ಳುತ್ತಾರೆ. ಮೊನ್ನೆ ಮೊನ್ನೆ ತಾನೆ ನಿನ್ನ ವಿಷಯ ಮಾತನಾಡುತ್ತಿದ್ದರು."

ಅವನು ಹೇಳಿದ್ದು ನಿಜವೂ ಆಗಿತ್ತು. ಇತ್ತೀಚೆಗೆ ಅವನ ತಾಯಿ ಘಾರಪುರೆಯವರನ್ನು ನೆನೆಸಿದ್ದರು. ಚಿಕ್ಕಿಗೆಂದು ಓಡಿ ಬರುತ್ತಿದ್ದ ಅವರ ಪುಟ್ಟ ಮಗಳ ಸವಿನೆನಪು ಅವರನ್ನು ಕಲ್ಪನಾಲೋಕಕ್ಕೆ ಎಳೆದಿತ್ತು. ಆ ಹುಡುಗಿ ಈಗ ಬೆಳೆದು ದೊಡ್ಡವಳಾಗಿರಬೇಕು. ಸದಾಶಿವನಿಗೆ ತಕ್ಕ ಹುಡುಗಿ. ಜೋಡಿ ಎಷ್ಟು ಚೆನ್ನ ಎಂದೆಲ್ಲಾ ಯೋಚಿಸಿದ್ದರು. ಆದರೆ ತಾಯಿಯ ಯೋಚನಾಲಹರಿ ಸದಾಶಿವನಿಗೆ ತಿಳಿದಿರಲಿಲ್ಲ.

ಒಂದು ಗಂಟೆಯವರೆಗೆ ಸಂಭಾಷಣೆ ಲವಲವಿಕೆಯಿಂದ ಸಾಗಿತು. ಅಡಿಗೆ ಮಾಡುತ್ತ ಕಮಲ ಅಡುಗೆಮನೆಯಿಂದಲೇ ಧ್ವನಿ ಸೇರಿಸುತ್ತಿದ್ದಳು. ಗಡಿಯಾರ ಒಂದು ಹೊಡೆದದ್ದು ಕೇಳಿ, ಭಾಸ್ಕರ, "ಕಮಲಾ ಮಾತಾಡಿದ್ದು ಸಾಕು! ಊಟದ ವಿಷಯ ಏನು ಮಾಡಬೇಕೋ ಬೇಗ ನೋಡು. ಬಂದಿರೋ ಗೆಳೆಯನ ಹೊಟ್ಟೆನ ಬರೀ ಮಾತಿನಿಂದಲೇ ತುಂಬಿಸ್ತೀಯಾ ಹೇಗೆ?"

"ಅಯ್ಯೋ, ಎಂಥಾ ಪೆದ್ದಿ ನಾನು. ಎಷ್ಟು ಹೊತ್ತು ಮಾಡ್ಬಿಟ್ಟೆ," ಎಂದು ತನ್ನನ್ನು ತಾನೇ ಬಯ್ದುಕೊಳ್ಳುತ್ತಾ ಕಮಲ ಕಳಕಳಿಯಿಂದ ನುಡಿದಳು. "ಸದಾಶಿವಣ್ಣನಿಗೆ ಹೊಟ್ಟೆ ತಾಳ ಹಾಕುತ್ತಿರಬಹುದು; ಇನ್ನೇನು ಬೇಗ ಅಡುಗೆ ಮಾಡಿ ಮುಗಿಸುತ್ತೇನೆ."

"ಹಾಗೇನಿಲ್ಲ. ನಾನು ಬರುವಾಗಲೇ ಗಾಡಿಯಲ್ಲಿ ತಿಂದಿದ್ದೆ," ಎಂದು ಸದಾಶಿವ ಸಮಾಧಾನ ಹೇಳಿದ. ಆದರೆ ಅವನ ಹೊಟ್ಟೆ ಆಗಲೇ ಚುರುಚುರುಗುಟ್ಟುತ್ತಿತ್ತು. [illegible]

ಬುತ್ತಿಯನ್ನು ತೆಗೆದುಕೊಡುತ್ತಾ, "ಆಯಿ, ಇದನ್ನು ಬೆಳಿಗ್ಗೆ ಮಾಡಿಕೊಟ್ಟಿದ್ದಳು. ಇದನ್ನು ಉಪ-ಯೋಗಿಸಬಹುದು" ಎಂದು ಭಾಸ್ಕರನ ಕೈಗೆ ಕೊಟ್ಟನು.

ಊಟ ಮಾಡುತ್ತಿರುವಾಗ ಭಾಸ್ಕರ ಸದಾ-ಶಿವನನ್ನು ಮುಂಬಯಿಗೆ ಬಂದ ಕಾರಣ ಕೇಳಿದ. ಅವನಿಗೆ ತಕ್ಷಣ ಏನು ಹೇಳಲೂ ತೋಚಲಿಲ್ಲ. "ಏನೋ ಒಂದೆರಡು ಪದಾರ್ಥ ಕೊಳ್ಳಬೇಕಿತ್ತು, ಬಂದಿದೀನಿ," ಎಂದು ತಡಬಡಿಸಿದ.

ಭಾಸ್ಕರ ಅಷ್ಟಕ್ಕೆ ಸುಮ್ಮನಾಗಲಿಲ್ಲ. ಮರು ಪ್ರಶ್ನೆ ಹಾಕಿದ, "ಏನು ಕೊಳ್ಳಬೇಕೆಂದಿದ್ದೀಯ? ಯಾರಿಗೆ? ನಿನಗೋ ಅಥವಾ ನಿನ್ನ ಸೋದರಜೀಗೋ?"

ಸದಾಶಿವನಿಗೆ ಸುಳ್ಳು ಹೇಳಲು ಮನಸ್ಸು ಬರಲಿಲ್ಲ. "ಇಲ್ಲ ನನಗೇನೆ. ಆಯಿಗೊಂದು ಜೊತೆ ಸೀರೆ, [illegible] ಜೊತೆ ಓಲೆ ಕೊಳ್ಳ ಬೇಕಂದಿದ್ದೀನಿ." ಎಂದ.

ಸದಾಶಿವ ಏನೋ ಮುಚ್ಚಿಡಲು ಪ್ರಯತ್ನಿ ಸುತ್ತಿದ್ದುದು ಭಾಸ್ಕರನಿಗೆ ತಿಳಿದುಹೋಯಿತು. "ಅಲ್ಲಯ್ಯ, ಯಾರಾದರೂ ಸಿರೆ, ಓಲೆ ತೆಗೆದು ಕೊಳ್ಳೋದಕ್ಕೆ ಮಾತ್ರ ಪುಣೆಯಿಂದ ಮುಂಬ ಯಿಗೆ ಬರುತ್ತಾರೆಯೇ? ಇಲ್ಲ, ಇನ್ನೂ ಬೇರೆ ಏನೋ ಇರಬೇಕು" ಎಂದು ಒತ್ತಾಯಿಸಿ ಕೇಳಿದ.

ಸದಾಶಿವ ಮನಸ್ಸು ಬಿಚ್ಚಿ ಹೇಳಿದ್ದ. "ಇಲ್ಲಿ ನೋಡು! ನಾನು ಮುಂಬಯಿಗೆ ಬಂದು ತುಂಬಾ ದಿನ ಆದವು. ಕೈಗೆ ಸ್ವಲ್ಪ ಕಾಸು ಸಿಕ್ಕಿತು. ಹಾಗೇ ಬಂದು ಒಂದು ಸಿನಿಮಾ ನೋಡಿ, ಸಾಮಾನು ಕೊಂಡು ಹೋಗೋಣ ಎಂದ್ಕೊಂಡೆ. ಪುಣೆ ಜೀವನ ಒಮ್ಮೊಮ್ಮೆ ತುಂಬಾ ಬೇಸರವಾಗಿಬಿಡ್ತದೆ ನೋಡು."

"ಓಹೋ! ಇಲ್ಲಿಗೆ ನೀನು ಬಂದದ್ದು ಒಳ್ಳೇ ದಾಯ್ತು ನೋಡು. ನಾವೂ ಇವತ್ತು ಒಂದು ಸಿನಿಮಾ ನೋಡ್ಬೇಕು ಅಂತ ಇದ್ದಿವಿ, ಸ್ವಸ್ತಿಕ್ ನಲ್ಲಿ ಒಳ್ಳೇ ಚಿತ್ರ ಇದೆ. 'ಏಕಚ್ ಪ್ಯಾಲಾ' ಅಲ್ಲಿ ಟಿಕೆಟ್ ಆಫೀಸಿನಲ್ಲಿ ನನ್ನ ಗೆಳೆಯ ಇದ್ದಾನೆ. ಇವತ್ತು ಭಾನುವಾರ ಆದ್ರೂ ಪರವಾಗಿಲ್ಲ. ಸೀಟುಗಳು ಮುಂಚೆಯೇ ಬುಕ್ಕಾಗಿದ್ದರೂ ಅಡ್ಡಿ ಯಿಲ್ಲ. ಟಿಕೆಟ್ ಕೊಡಿಸುತ್ತಾನೆ. ಹೋಗೋಣಂತೆ," ಹೇಳಿದ.

"ಅದೇನೋ ಸರಿ. ಆದರೆ ಸಾಮಾನು ಕೊಳ್ಳೋದಕ್ಕೆ ಹೋಗೋದು ಯಾವಾಗ?" ಸದಾ ಶಿವ ಅನುಮಾನಿಸಿ ಕೇಳಿದ. ಅವನಿಗೆ ಭಾಸ್ಕರ ಈ ದಿನ ತನ್ನನ್ನು ಬಿಡುವುದಿಲ್ಲ ಎಂಬುದು ಇನ್ನೂ ಮನಸ್ಸಿಗೆ ತಟ್ಟಿರಲಿಲ್ಲ.

"ಅದರ ಯೋಚನೆ ಬಿಡು! ಕಮಲ ಇದ್ದಾಳಲ್ಲ ವ್ಯಾಪಾರ ಮಾಡುವುದರಲ್ಲಿ ಅವಳನ್ನು ಬಿಟ್ಟ ರಿಲ್ಲ. ನೋಡು, ನನ್ನನ್ನು ಹೇಗೆ ಸುಲಭದಲ್ಲಿ ಹೊಡೆದುಬಿಟ್ಟಳು! ಅವಳ ತಂದೆ ನನಗೆ ಒಂದು ರೂಪಾಯಿನೂ ವರದಕ್ಷಿಣೆ ಕೊಡಲಿಲ್ಲ!" ಭಾಸ್ಕರ ಹೀಗೆ ಕಮಲಳನ್ನು ಗೇಲಿ ಮಾಡುವುದು ವಾಡಿಕೆ. ಕಮಲಳೂ ಕಮ್ಮಿ ಇರಲಿಲ್ಲ. ಅವಳು ಚಟಕ್ಕನೆ ಉತ್ತರಿಸಿದಳು. "ಅದು ನಿಮ್ಮ ತಪ್ಪು. ಅಪ್ಪನೇನೋ ಸಾಕಷ್ಟು ವರದಕ್ಷಿಣೆ ಕೊಡಲು ತಯಾರಿದ್ದರು. ನೀವೇ ದೊಡ್ಡ ಮನುಷ್ಯರಂತೆ ಬೇಡ ಅಂದಿರಿ. ಈಗ ಪೇಚಾಡ್ತಾ ಇದ್ದೀರಿ."

"ಹೋಗ್ಲಿ ಬಿಡು, ಏನಾಯ್ತು ಈಗ? ಭಾಸ್ಕರ ನಗುತ್ತಾ ಹೇಳಿದ. ನಿಮ್ಮ ತಂದೆ ನನಗೆ ಅಮೂಲ್ಯ ವಾದ ರತ್ನವನ್ನೇ ಕೊಟ್ಟಿದ್ದಾರಲ್ಲ. ಇನ್ನೇನು ಬೇಕು ನನಗೆ!"

"ಸಾಕು ಸುಮ್ಮನಿರಿ!" ಹುಸಿಮುನಿಸಿನಿಂದ ಕಮಲ ಸಿಟ್ಟು ಮಾಡಿ ಹೇಳಿದಳು. "ನೀವು ಹೇಗೆಲ್ಲ ಮಾತಾಡ್ತಾ ಇದ್ದರೆ ಸದಾಶಿವಣ್ಣ ಏನೆಂದು ತಿಳಿದಾರು?"

ಗಂಡ ಹೆಂಡಿರ ಸರಸಸಲ್ಲಾಪವನ್ನು ಕೇಳಿ ಸದಾ ಶಿವನ ಅಂತರಂಗದಲ್ಲಿ ಏನೇನೋ ಭಾವನೆಗಳು ಎದ್ದು ಹರಡಿದವು. ಅವರ ಸಂಸಾರದಲ್ಲಿನ ಸಾಮರಸ್ಯ, ರಸಿಕತೆ ಇವನಿಗೆ ತುಂಬಾ ಮೆಚ್ಚುಗೆ ಯಾಯಿತು. ಇದನ್ನೆಲ್ಲ ಕಂಡು ತನ್ನ ಜೀವನ ದಲ್ಲಿ ಏನೋ ಕೊರತೆ ಇದೆ ಎಂದು ಮನಸ್ಸು ತುಡಿಯಿತು. ಹೆಂಗಸರಿಗೆ ಈ ಬೇಗುದಿಗಳು ಬಹಳ ಬೇಗ ಅರ್ಥವಾಗಿಬಿಡುತ್ತವೆ. ಸದಾಶಿವನ ಮುಖದಲ್ಲಿ ಈ ಭಾವನೆಗಳ ಆಟವನ್ನು ಗುರುತಿಸಿ ಕಮಲ ಕೇಳಿದಳು, "ಸದಾಶಿವಣ್ಣ, ನಮಗೆಲ್ಲಾ ಬಾಯಿ ಸಿಹಿ ಯಾವಾಗ ಮಾಡು ತ್ತಾರೆ?" ಸದಾಶಿವನಿಗೆ ಅವಳ ಮಾತು ಅರ್ಥ

ಆಗಬಹುದು! ಆದರೆ ನನ್ನ ಮದುವೆ ವಿಷಯ ಕೇಳ್ತಿದ್ದೀಯಾ ಅಂದರೆ, ಅದು ಇನ್ನೂ ತುಂಬಾ ದೂರ. ನಿನಗೇ ಗೊತ್ತಲ್ಲ, ನನಗೆ ಮದುವೆಯಾಗ ಬೇಕಾದ ತಂಗಿ ಇದ್ದಾಳಲ್ಲ!" ಎಂದು ಮಾತು ಹಾರಿಸಲು ನೋಡಿದ.

"ಆದರೆ ಅವಳಿಗಿನ್ನೂ ಹತ್ತು ವರ್ಷ ಇರ-ಬೇಕು ಈಗ. ನೀವು ಹೇಳೋದರ ಅರ್ಥ ಏನು! ಇನ್ನೂ ಎಳೆಂಟು ವರ್ಷ ಕಾಯ್ತೀರಿ ಅಂತಲೆ?" ಎಂದು ಕಮಲ ಕೆಣಕಿ ಕೇಳಿದಳು.

ನಿಜಕ್ಕೂ ಹೇಳಬೇಕೆಂದರೆ, ಸದಾಶಿವ ಈ ವಿಷಯ ಸರಿಯಾಗಿ ಯೋಚನೆಯೇ ಮಾಡಿರಲಿಲ್ಲ. ಅವನು ತಬ್ಬಿಬ್ಬಾದ.

"ನಾನಿನ್ನೂ ಅದರ ವಿಷಯ ಯೋಚನೆ ಮಾಡಿಲ್ಲ. ಅಷ್ಟೆ" ಎಂದು ಒಪ್ಪಿಕೊಂಡ.

"ನಾನು ಏಕೆ ಕೇಳಿದೆ ಅಂದರೆ..." ಕಮಲ, ರಾಗ ಎಳೆಯುತ್ತಾ ಹೇಳಿದಳು. "ಸೊಲ್ಲಾಪುರ-ದಲ್ಲಿ ನನ್ನ ಗೆಳತಿಯೊಬ್ಬಳಿದ್ದಾಳೆ. ಅವಳಿಗೀಗ ಇಪ್ಪತ್ತು ತುಂಬಿದೆ. ಎಂಟನೇ ಸ್ಟ್ಯಾಂಡರ್ಡ್ ವರೆಗೆ ಓದಿದ್ದಾಳೆ. ಮನೆಗೆಲಸದಲ್ಲಿ ತುಂಬಾ ಜಾಣೆ. ನೋಡುವದಕ್ಕೂ ಚಂದವಾಗಿದ್ದಾಳೆ. ಚೆನ್ನಾಗಿ ಹಾಡು ಹಾಡುತ್ತಾಳೆ ಕೂಡ. ನಿಮ್ಮ ಹಾಗೆ ಅವ ಳಿಗೂ ತಂದೆ ಇಲ್ಲ, ತಾಯಿ ಮಾತ್ರ ಇದ್ದಾರೆ. ಅವರಿಗಿರೋ ಆಸ್ತಿ ಎಂದರೆ ಒಂದು ಮನೆ ಮಾತ್ರ. ಬರೋ ಬಾಡಿಗೆಯಲ್ಲಿ ಜೀವನ ಸಾಗಿಸ್ತಾ ಇದ್ದಾರೆ. ನನಗೆ ಆ ಹುಡುಗಿ ಹತ್ತು ವರ್ಷಗಳಿಂದ ಗೊತ್ತು. ಬಹಳ ಒಳ್ಳೇ ಜಾಣ ಹುಡುಗಿ."

ಸದಾಶಿವ ಹಾ ಹೂ ಎನ್ನದೆ ಸುಮ್ಮನೆ ಕೂತಿದ್ದರೂ, ಮೈಯೆಲ್ಲಾ ಕಿವಿಯಾಗಿ ಕೇಳುತ್ತಿದ್ದ. ಕಮಲ ಅದನ್ನು ಗಮನಿಸಿ ಮುಂದುವರೆದಳು.

"ಮದುವೆಗೆ ನಿಮಗೊಂದು ಕಾಸೂ ಖರ್ಚು ಇಲ್ಲ. ಇನ್ಶೂರೆನ್ಸಿನಿಂದ ಬಂದ ಹಣ ಸ್ವಲ್ಪ ಇದೆ. ಎಲ್ಲಾ ಖರ್ಚು ಅವರೇ ನೋಡಿಕೊಳ್ಳು ತ್ತಾರೆ. ಆದರೆ ವರದಕ್ಷಿಣೆ ಮಾತಿಲ್ಲ. ಪಾಪ! ಅದೇ ಕಾರಣ, ಆ ಹುಡುಗಿ ಇಷ್ಟು ದಿನ ಮದುವೆ ಯಾಗದೇ ಇರೋದಕ್ಕೆ!"

ಈ ವೇಳೆಗೆ ಸದಾಶಿವ ಉತ್ತರ ಯೋಚಿಸಿ ಬಿಟ್ಟಿದ್ದ. "ನಾನೀಗ ಏನೂ ಹೇಳಲಾರೆ. ನನ್ನ ಮಾವ ಇದ್ದಾರಲ್ಲ; ಮದುವೆ ವಿಷಯದಲ್ಲಿ ಅವರದೇ ನಿರ್ಧಾರ. ನಾಸಿಕನಲ್ಲಿದ್ದಾರೆ, ನೀನೂ ಅವರನ್ನು ನೋಡಿದ್ದಿರಬಹುದು."

"ಹೌದು, ನಿಮ್ಮ ಮನೆಗೆ ಆಗಾಗ ಬರುತ್ತಿದ್ದ ರಲ್ಲ. ಅವರನ್ನು ಕೇಳಬೇಕು. ನಿಮ್ಮ ತಾಯಿ ಒಪ್ಪ ಬೇಕು. ಜಾತಕ ಆಗಬೇಕು. ಎಲ್ಲಾ ಸರಿ. ನಿಮ್ಮ ಮಾವ ಅವರ ವಿಳಾಸ ಕೊಡಿ. ಹುಡುಗಿ ಚಿಕ್ಕಪ್ಪ ಇದ್ದಾರೆ. ಅವರು ನಿಮ್ಮ ಮಾವಗೆ ಬರೆದು ಮದುವೆಯ ವಿಷಯ ಪ್ರಸ್ತಾಪಮಾಡುವಂತೆ ಬರೆಯುತ್ತೇನೆ. ನನಗೆ ಖಂಡಿತ ಅನಿಸುತ್ತೆ. ನಿಮ್ಮಿಬ್ಬರಿಗೂ ವರಸಾಮ್ಯ ಜೋಡಿ ಚೆನ್ನಾ ಗಿದೆ ಅಂತ," ಕಮಲ ಸದಾಶಿವನ ಕಡೆ ನೋಡಿ ಮೆಚ್ಚುಗೆಯ ಧ್ವನಿಯಲ್ಲಿ ಹೇಳಿದಳು.

"ಆದರೆ ಅವರು ಯಾವ ಜನ, ಗೊತ್ರ ಏನು ಎಲ್ಲಾ ವಿಚಾರಿಸಬೇಕಲ್ಲ!" ಸದಾಶಿವ ಒಂದು ಅಭ್ಯಂತರ ತೆಗೆದ, "ಆಯಿಗೆ ಇವೆಲ್ಲ ಮುಖ್ಯ, ತುಂಬಾ ನೋಡುತ್ತಾರೆ."

"ನೀವು ದೇಶಸ್ಥರು ತಾನೆ?"

"ಹೌದು, ಅವರೂ ದೇಶಸ್ಥರೆ?"

"ಹೌದು!" ಮುಖ್ಯವಾದ ಅಡ್ಡಿ ನಿವಾರಣೆ ಯಾದಂತಾಯಿತು.

ಇದುವರೆಗೂ ಸುಮ್ಮನಿದ್ದ ಭಾಸ್ಕರನಿಗೆ ಬೆಣ್ಣೆ ಯಂಥ ಮಾತನಾಡಲು ಅವಕಾಶ ಒದಗಿತು. "ನೋಡು ಸದಾಶಿವ," ಕುಹಕ ಗಂಭೀರ ಧ್ವನಿ ಯಲ್ಲಿ ನುಡಿದ, "ನನ್ನ ಹೆಂಡತಿ ಕಮಲ ಇದ್ದಾ ಳಲ್ಲ ಅವಳು ಬ್ರಹ್ಮ ಭೂಮಿಗೆ ಕಳಿಸಿದ ಖಾಸಾ ರಾಯಭಾರಿ! ಯಾರಾದರೂ ಮದುವೆಯಾಗದ ವರು ನಮ್ಮ ಮನೆಗೆ ಬಂದರೆ ಸಾಕು, ಅವರಿ ಗೊಂದು ಹೆಣ್ಣು ಗಂಟುಹಾಕುವ ಪ್ರಯತ್ನ ಮಾಡುತ್ತಾಳೆ. ನನಗೆ ಒಂದೊಂದು ಸಲ ಅನಿ ಸುತ್ತೆ, ಇವಳ ಮದುವೆಗಿರುವ ಗಂಡಸರೆಲ್ಲ ಇವಳನ್ನು ಸಂಬಳ ಕೊಟ್ಟು ಕೆಲಸಕ್ಕಿಟ್ಟಿದ್ದಾರೊ ಏನೋ ಅಂತ! ಈ ಕೆಲಸದಲ್ಲಿ ಇವಳು ಎಷ್ಟು ಮುತುವರ್ಜಿವಹಿಸುತ್ತಾಳೇಂತ!" ಮಾತು ಕೇಳಿ ಇಬ್ಬರೂ ನಕ್ಕರು.

ಊಟವಾದ ಮೇಲೆ ಎದ್ದು ಕೈ ತೊಳೆದು ಮುಂದಿನ ಕೋಣೆಗೆ ಬಂದರು.

ಅಡುಗೆ ರುಚಿಯಾಗಿತ್ತು. ಮಾತುಕತೆ ರಸ ವತ್ತಾಗಿತ್ತು. ಸದಾಶಿವ ಎಂದಿಗಿಂತ ಎರಡು

ತುತ್ತು ಹೆಚ್ಚೇ ತಿಂದಿದ್ದನು. ದೇಹ ಮತ್ತು ಮನಸ್ಸನ್ನು ಒಂದು ಬಗೆಯ ಆಂತರಿಕ ತೃಪ್ತಿ ಆವರಿಸಿತ್ತು. ಕಮಲ ನಿರೂಪಿಸಿದ ತನ್ನ ಗೆಳತಿಯ ಚಿತ್ರ ಅವನ ಕಣ್ಣ ಮುಂದೆ ಪದೇ ಪದೇ ಕುಣಿದಾಡತೊಡಗಿತು. ಆ ಚಿತ್ರ ಮಸುಕಾಗಿದ್ದರೂ ಮುಂದೆ ತನ್ನ ಬಾಳಗೆಳತಿಯಾಗಬಹುದಾದ ಹುಡುಗಿಯ ಬಗ್ಗೆ ತನ್ನದೇ ಚಿತ್ರ ಬಿಡಿಸಲಾರಂಭಿಸಿದನು. ಅದಕ್ಕಿಂತ ಉಲ್ಲಾಸಮಯ ಕಸರತ್ತು ಮನಸ್ಸಿಗೆ ಬೇಕೆ? ಆ ಚಿತ್ರ ಪ್ರತಿಕ್ಷಣವೂ ಬದಲಾಗುತ್ತಿತ್ತು. ಅಷ್ಟೇ ಅಲ್ಲ ಹೆಚ್ಚು ಹೆಚ್ಚು ಮೋಹಕವಾಗತೊಡಗಿತು. ಈಗಿದ್ದ ಭಾವನೆಯ ಚೌಕಟ್ಟಿನಲ್ಲಿ ತಾನು. ಮುಂಬಯಿಗೆ ಬಂದುದರ ಮೊದಲ ಉದ್ದೇಶ ಎಷ್ಟು ಹಾಸ್ಯಾಸ್ಪದವಾಗಿ ಮೂರ್ಖತೆಯ ಚಿಹ್ನೆಯಾಗಿ ಕಂಡಿತು! ಭಾಸ್ಕರ ಸಿಕ್ಕಿದ್ದು ದೇವರ ದಯವೇ ಸರಿ. ಇಲ್ಲದೆ ಇದ್ದರೆ ಇದ್ದ ಹಣವನ್ನೆಲ್ಲ ನೀರಿನಂತೆ ಬಳಸಿ ಬರೀ ಕೈಯಲ್ಲಿ ಮನೆಗೆ ಹಿಂದಿರುಗಬೇಕಾಗಿತ್ತು. ಹೌದು, ಹಾಗೇ ಆಗುತ್ತಿತ್ತು. ಅದೃಷ್ಟವಶಾತ್ ಎಲ್ಲಾ ಒಳ್ಳೇದಕ್ಕೇ ಆಯಿತು. ಸದಾಶಿವನ ಯೋಚನಾಲಹರಿ ಹೀಗೆ ಸಾಗುತ್ತಾ ಮಧ್ಯಾಹ್ನದ ಬಿಸಿಲಿಗೆ ಸೋತಿತು. ಕಣ್ಣೆಳೆದುಕೊಂಡು ಹೋಗಿ ನಿದ್ದೆ ಹತ್ತಿತು.

"ಚಹಾ ತಯಾರ್, ಇಬ್ಬರೂ ಏಳಿ!"

ಕಮಲಳ ಇಂಪಾದ ಕರೆಗೆ ಸದಾಶಿವ ಮತ್ತು ಭಾಸ್ಕರ ಇಬ್ಬರೂ ಎದ್ದು ಕಣ್ಣುಜ್ಜಿ ಕುಳಿತರು.

"ಹೊತ್ತಾಯಿತ್ತು ಏಳಿ." ಎಂದು ಅವಸರಪಡಿಸುತ್ತಾ, ಕಮಲ, "ಚಹಾ ತೆಗೆದುಕೊಂಡು ಹೊರಡಲು ಸಿದ್ಧರಾಗಿರಿ, ಆಗಲೇ ನಾಲ್ಕು ಗಂಟೆಯಾಗುತ್ತಾ ಬಂತು," ಎಂದಳು.

ಕಾಲಬಾದೇವಿಯಲ್ಲಿ ಕಮಲಳಿಗೆ ಗೊತ್ತಿದ್ದ ಸೀರೆ ಹಾಗೂ ಓಲೆ ಸಿಗುವ ಅಂಗಡಿಗಳು ಇದ್ದವು. ಸುಲಭ ಹಾಗು ನಿಖರವಾದ ಬೆಲೆಗೆ ಅಲ್ಲಿ ಸಾಮಾನುಗಳು ಸಿಕ್ಕುತ್ತವೆ ಎಂದು ಅವಳು ಅನೇಕ ಸಾರಿ ವ್ಯಾಪಾರಮಾಡಿ ತಿಳಿದುಕೊಂಡಿದ್ದಳು.

ಮೊದಲು ಅಲ್ಲಿಗೆ ಹೋಗುವದು; ನಂತರ ಸಿನಿಮಾ, ಅದು ಮುಗಿದ ಮೇಲೆ ಊಟಮಾಡಿಕೊಂಡು ರಾತ್ರಿ ಪ್ಯಾಸೆಂಜರ್ ಗಾಡಿಗೆ ಸದಾಶಿವ ಪುಣೆಗೆ ಹಿಂತಿರುಗುವದು ಎಂದು ಕಾರ್ಯಕ್ರಮ ಹಾಕಿಕೊಂಡರು.

ಗೆಳೆಯರಿಬ್ಬರೂ ಬಟ್ಟೆಹಾಕಿಕೊಳ್ಳುವ ಹೊತ್ತಿಗೆ ಕಮಲಳೂ ಸಿದ್ಧಳಾಗಿದ್ದಳು. ಅವಳುಟ್ಟಿದ್ದ ತಿಳಿ ನೀರಳೆ ಬಣ್ಣದ ಸೀರೆಯಲ್ಲಿ ಚೆಲುವೆಯಾಗಿ ಕಂಡಳು. ಭಾಸ್ಕರನ ಮುಖದಲ್ಲಿ ಹೆಮ್ಮೆ ಹಾಗೂ ತೃಪ್ತಿ ಎದ್ದು ಕಾಣುತ್ತಿದ್ದವು. "ಹೌದು, ಕಮಲಳಂಥ ಚೆಲುವೆ ಹೆಂಡತಿ ನನಗೂ ಇದ್ದರೆ. ನಾನೂ ಹಾಗೆ ಹೆಮ್ಮೆಪಟ್ಟುಕೊಳ್ಳುತ್ತಿದ್ದೆ," ಎಂದುಕೊಂಡ ಸದಾಶಿವ. ನಾನು ಮದುವೆಯಾಗಬೇಕು: ಬಾಳಗೆಳತಿ ಇಲ್ಲದಿರುವುದರಿಂದಲೇ ನನ್ನ ಮನಸ್ಸು ಬೇಜವಾಬ್ದಾರಿಯಿಂದ ಚಡಪಡಿಸುತ್ತಿದೆ, ಎಂದು ಏನೇನೋ ಯೋಚಿಸತೊಡಗಿದ.

ಬಸ್ಸು ಹಿಡಿದು ಕಾಲಬಾದೇವಿಗೆ ಹೋದರು. ಅಂಗಡಿಯೊಳಕ್ಕೆ ಹೋಗುವ ಮುನ್ನ ಕಮಲ ಸದಾಶಿವನನ್ನು ಕೇಳಿದಳು, "ಸೀರೆ, ಓಲೆ ಎಷ್ಟರ ಒಳಗಾಗಬೇಕು? ಹೇಳಿದರೆ ಆಯ್ಕೆಗೆ ಅನುಕೂಲವಾಗುತ್ತೆ. ಕಮಲಳ ಈ ನೇರವಾದ ಮತ್ತು ಮುಂದಾಲೋಚನೆಯ ಮಾತು ಸದಾಶಿವನಿಗೆ ಪ್ರಿಯವಾದವು. ನನ್ನ ಬಳಿ ಇರುವುದು ನಲವತ್ತು ರೂಪಾಯಿ ಇದರಲ್ಲಿ ಆಯಿಗೆ ಒಂದು ಜೊತೆ ಸೀರೆ ಸಕ್ಕೂಗೆ ಒಂದು ಜೊತೆ ಓಲೆ, ನನಗೆ ರೈಲಿನ ಛಾರ್ಜ್ ಆಗಬೇಕು. ಸಾಕಾಗುತ್ತೇ ?" ಎಂದು ಕೇಳಿದನು.

"ಸಾಕು, ಇರೋದ್ರಲ್ಲೆ ಹೊಂದಿಸೋಣಂತೆ."

ಕಮಲ ಆ ಅಂಗಡಿಯಲ್ಲಿ ಹಿಂದೆ ಅನೇಕ ಬಾರಿ ವ್ಯಾಪಾರ ಮಾಡಿದ್ದಳು. ಅಂಗಡಿಯವನು ಅವಳನ್ನು ಗುರುತುಹಿಡಿದು ಅನೇಕ ಮಾದರಿ ಸೀರೆಗಳನ್ನು ತೋರಿಸಿದನು. ಹತ್ತು ಹದಿನೈದು ಸೀರೆಗಳನ್ನು ಪರೀಕ್ಷಿಸಿದ ಮೇಲೆ ಕಮಲ ಒಂದು ಜೊತೆ ಸೀರೆ ಆರಿಸಿಟ್ಟಳು. ಭಾಸ್ಕರ ಸದಾಶಿವ ಇಬ್ಬರೂ ಒಪ್ಪಿದರು. ಅಲ್ಲಿಂದ ಮತ್ತೊಂದು ಅಂಗಡಿಗೆ ಹೋದರು. ಅಂಗಡಿಯವ ಹೊಸ ಹೊಸ ನಮೂನೆಯ ಓಲೆಗಳನ್ನು ತೋರಿಸುತ್ತಿರುವಾಗ ಸದಾಶಿವ ಜ್ಞಾಪಿಸಿಕೊಂಡು, "ಸಕ್ಕೂಗೆ ಕೆಂಪು ಕಲ್ಲು ಎಂದರೆ ಇಷ್ಟ. ಅಂಥಾದ್ದು ಸಿಕ್ಕರೆ ನೋಡು," ಎಂದ. ಕಮಲ ನಕ್ಕು ಬಹಳ ಹುಡುಕಿ ಒಂದು ಜೊತೆ ಓಲೆ ಆರಿಸಿ ತೋರಿಸಿದಳು. ಇಬ್ಬರೂ ಸಂತೋಷದಿಂದ ಅವಳ ಆಯ್ಕೆಯನ್ನು

ಈ ಸಿಡಿಯುವ ತಲೆನೋವು ಬಾಧಿಸುತ್ತಿರುವಾಗ ಇವೊತ್ತು ಇಂಟರ್‌ವ್ಯೂನಲ್ಲಿ ಏನು ಮಾಡುವೆನೋ ತಿಳಿಯದು.

ನನಗೆ ಹೀಗಾಗುತ್ತಿದ್ದರೆ ಖಂಡಿತ ಅನಾಸಿನ್ ತೆಗೆದುಕೊಳ್ಳುತ್ತಿದ್ದೆ!

# ಶೀಘ್ರ ಉಪಶಮನಕ್ಕೆ ಪ್ರಭಾವಶಾಲಿ ಹಾಗೂ ವಿಶ್ವಾಸಾರ್ಹವಾದ ಅನಾಸಿನ್ ತೆಗೆದುಕೊಳ್ಳಿರಿ.

**ಪ್ರಭಾವಶಾಲಿ :** ಅನಾಸಿನ್ ನೋವನ್ನು ಶೀಘ್ರವಾಗಿ ಉಪಶಮನಗೊಳಿಸುತ್ತದೆ. ಏಕೆಂದರೆ ಅದರಲ್ಲಿ ಜಗತ್ತಿನಾದ್ಯಂತ ಡಾಕ್ಟರರು ಹೆಚ್ಚಾಗಿ ಶಿಫಾರಸು ಮಾಡುವ ವೇದನಾಹಾರಿ ಔಷಧಾಂಶ ಅಧಿಕ ಪ್ರಮಾಣದಲ್ಲಿದೆ.

**ವಿಶ್ವಾಸಾರ್ಹ :** ಡಾಕ್ಟರರ ವಿಶ್ವಸನೀಯ ಔಷಧದಂತೆ ಅನಾಸಿನ್ ಔಷಧಗಳ ಸಂಯೋಜನೆಯಾಗಿದೆ. ಆದ್ದರಿಂದಲೇ ಲಕ್ಷೋಪಲಕ್ಷ ಜನರು ಅನಾಸಿನ್ ತೆಗೆದುಕೊಳ್ಳುತ್ತಾರೆ ಮತ್ತು ಅದನ್ನು ಶಿಫಾರಸು ಮಾಡುತ್ತಾರೆ.

ಶೀತ ಮತ್ತು ಫ್ಲೂವಿನಿಂದ ಉಂಟಾಗುವ ನೋವು, ತಲೆನೋವು, ಬೆನ್ನುನೋವು, ಸ್ನಾಯುನೋವು ಮತ್ತು ಹಲ್ಲುನೋವುಗಳಿಗೆ ಅನಾಸಿನ್ ಪರಿಣಾಮಕಾರಿಯಾಗಿದೆ.







ಭಾರತದ ಅತ್ಯಂತ ಜನಪ್ರಿಯ ವೇದನಾಹಾರಿ

"ಖಂಡಿತ ಬರುತ್ತೇವೆ. ಆದರೆ ನೀನು ಮಹಾ-ಬಲೇಶ್ವರಕ್ಕೆ ಕರೆದುಕೊಂಡು ಹೋಗುವುದಾದರೆ ಮಾತ್ರ," ಎಂದು ಭಾಸ್ಕರ ನುಡಿದ.

"ಯಾಕಾಗಬಾರದು? ನೀವು ನಮ್ಮ ಮನೆಗೆ ಬನ್ನಿ, ಅಲ್ಲಿಂದ ನಾವೆಲ್ಲ ಟ್ರಿಪ್ ಹೋಗೋಣ ವಂತೆ."

ನಡುವೆ ಬಾಯಿ ಹಾಕಿ ಕಮಲ ಅಂದಳು: "ಮೊದಲು ನಿಮ್ಮ ಮದುವೆ ಆಗಲಿ. ಆಗ ನಾವು ನಾಲ್ವರೂ ಒಟ್ಟಿಗೆ ಹೋಗಬಹುದು. ತಮಾಷೆ ಯಾಗಿರುತ್ತೆ!"

ಎಲ್ಲರೂ ನಕ್ಕರು, ಸದಾಶಿವ ನುಡಿದ: "ನೋಡೋಣ, ಮದುವೆ ಎಲ್ಲಾ ದೇವರ ಇಚ್ಛೆ."

ಸದಾಶಿವ ಕೊನೆಗೊಮ್ಮೆ ಹೊರಟು ನಿಂತಾಗ ಕಮಲ ಅಂದಳು: "ಸೀರೆ ಆಯಿಗೆ ಓಲೆ ಸಕ್ಕೂಗೆ ಒಪ್ಪಿಗೆ ಆಯ್ತೋ ಇಲ್ಲವೋ ಬರೆದು ತಿಳಿಸಿ."

ಭಾಸ್ಕರ ಸ್ಟೇಷನ್‌ವರೆಗೂ ಅವನನ್ನು ಬೀಳ್ಕೊಡಲು ಹೋದನು. ಗಾಡಿ ಕೂಗು ಹಾಕಿ ಹೊರಟಾಗ ಸದಾಶಿವ ತುಂಬಿದ ಮನದಿಂದ ಅವನನ್ನು ಬೀಳ್ಕೊಟ್ಟನು.

ಗಾಡಿಯಲ್ಲಿ ಜನ ಹೆಚ್ಚಾಗಿರಲಿಲ್ಲ, ಮೂಲೆಯಲ್ಲಿ ಒಳ್ಳೆ ಜಾಗ ಸಿಕ್ಕಿತು. ಮಲಗಿಕೊಳ್ಳುವಡಕ್ಕೆ ಅವಕಾಶವೂ ಇತ್ತು. ಆದರೆ ಸದಾಶಿವನಿಗೆ ಬಹಳ ಹೊತ್ತು ನಿದ್ದೆ ಬರಲಿಲ್ಲ. ದಿನದ ಆಗುಹೋಗುಗಳು ಅವನ ಕಣ್ಣ ಮುಂದೆ ಚಿತ್ರಪಟದಂತೆ ಸರಿಯುತ್ತಾ ಹೋದವು. ಮುಂಬಯಿಗೆ ಹೊರಟು ನಿಂತಾಗ ತನ್ನ ಇಚ್ಛೆ ಉದ್ದೇಶಗಳು ಹೇಗಿದ್ದವು, ಅವು ಹೇಗೆ ಬದಲಾದವು ಎಂದು ಅಚ್ಚರಿಯಿಂದ ನೆನಪುಗಳನ್ನು ಮೆಲಕು ಹಾಕುತ್ತಿದ್ದನು. ಭಾಸ್ಕರ ಆ ದಿನ ತನಗೆ ಸಿಗದಿದ್ದರೆ ತಾನು ಏನು ಮಾಡಿಬಿಡುತ್ತಿದ್ದೆ, ಈಗೆಲ್ಲ ಸರಿಹೋಯಿತಲ್ಲ ಎಂದು ತೃಪ್ತಿಯಾಯಿತು. ಮತ್ತೆ ಕಮಲ... ತಾನು ಎಷ್ಟೋ ವರ್ಷ ಹಿಂದೆ ಕಂಡಿದ್ದ, ಕೂಡಿ ಆಡಿದ್ದ ಪುಟ್ಟ ಹುಡುಗಿ ಬೆಳೆದು ಚಲುವೆಯಾಗಿ ಪ್ರೀತ್ಯಾದರಗಳಿಂದ ತುಂಬಿ ತುಳುಕುತ್ತಿದ್ದ ಹೆಣ್ಣಾಗಿದ್ದಳು. ಅಂಥ ಮಡದಿ ತನಗೂ ಸಿಕ್ಕರೆ? ತನಗೂ ಭಾಸ್ಕರನಂಥ ಗೃಹಸೌಖ್ಯ ಒದಗಿದರೆ ಕಮಲ ಸೂಚಿಸಿದ್ದ ಸಂಬಂಧ ಕುದುರಿದರೂ ಕುದುರೀತು. ಆ ಹುಡುಗಿಯನ್ನು ಚೆನ್ನಾಗಿ ಬಲ್ಲೆ ಎಂದು ಕಮಲ ಹೇಳಿದ್ದಳು. ಅವಳನ್ನು ಎಷ್ಟು ಹೊಗಳಿದ್ದಳು. ಆ ಹುಡುಗಿ ಚೆಲುವೆಯೂ ಸುಸ್ವಭಾವದವಳೂ ಆಗಿರಲೇಬೇಕು. ತನಗಿಂತ ಚೆಲುವೆ ಎಂದು ಕಮಲ ಅಂದಿದ್ದಳು. ಹುಡುಗಿಯ ಮನೆತನ ತನಗೆ ಚೆನ್ನಾಗಿ ಗೊತ್ತಿಲ್ಲ ಎಂದು ಆಯಿ ಅಡ್ಡಬರಬಹುದೇ? ಆದರೆ ಅವರನ್ನು ಹೇಗಾದರೂ ಮಾಡಿ ಒಪ್ಪಿಸಬೇಕು. ತಾನು ತಂದ ಸೀರೆ ಕೊಟ್ಟಾಗ ಆಯಿ ಎಷ್ಟು ಸಂತೋಷ ಪಟ್ಟಾಳು! ಪಾಪ! ಆಯಿಗೆ ಮನೆಯಲ್ಲಿ ಸಹಾಯ ಮಾಡಲು ಯಾರಾದರೂ ಬೇಕೇ ಬೇಕು. ಅವಳು ಈಗಾಗಲೆ ಸೊಸೆಯ ಬಗ್ಗೆ ಕನಸು ಕಂಡಿರಲೂ ಸಾಕು. ಸಕ್ಕೂ ಸಹ ಅತ್ತಿಗೆ ಬಂದರೆ ಎಷ್ಟು ಸಂತೋಷ ಪಡುತ್ತಾಳೆ. ಆ ಓಲೆಗಳು, ಅವನ್ನು ನೋಡಿದ ಕೂಡಲೆ ಅವಳು ಜಿಗಿದು ನಕ್ಕು ತನ್ನ ಸಂತೋಷವನ್ನು ತೋರಿಸಿಯಾಳು! ಸದ್ಯ ತಾನು ಸಿಕ್ಕ ಹಾಗೆ ಹಣ ಪೋಲು ಮಾಡಲಿಲ್ಲವಲ್ಲ! ಆಯಿ ತನ್ನ ದುಂದುಗಾರಿಕೆಯ ಬಗ್ಗೆ ದೂರಿಯಾಳು. ಆದರೂ ಒಳ ಒಳಗೆಸಂತೋಷಪಡುತ್ತಾಳೆ. ತನಗೂ ಸಂತೋಷವಾಗಿದೆ ಪ್ರಪಂಚವೇ ಆನಂದಮಯವಾಗಿ ಕಾಣುತ್ತಿದೆ. ಜೇಬಿನಲ್ಲಿದ್ದ ಓಲೆಗಳನ್ನು ಮುಟ್ಟಿನೋಡಿಕೊಂಡ, ಚೀಲದಲ್ಲಿದ್ದ ಸೀರೆಯ ಕಡೆ ಕಣ್ಣು ಹಾಯಿಸಿದ, ಅದೇನೋ ಹಿಂದೆಂದೂ ಅನುಭವಿಸದ ಆನಂದ ಅವನ ಹೃದಯವನ್ನು ತುಂಬಿಕೊಂಡಿತು. ✡



Printed & published by B. V. Jigjinni, on behalf of Administrator, Loka Shikshana Trust, at Samyukta Karnataka Press, Koppikar Road, Hubli–580 020. Rept : Bombay : V. Satyamurthy Phone : 522412; Calcutta : H. Majumdar 46–4233; Madras : K. A. Subramanian Phone :

*Registered with the Registrar of Newspaper for India under No. 3533/57*